ಶ್ರೀ ೧೦೦೮ ಶ್ರೀ ರಂಭಾಪುರೀ ಶ್ರೀ ಜಗದ್ಗುರು

ಪ್ರಸನ್ನ ರೇಣುಕರ

# ಜೀವನ ಚರಿತ್ರೆ.






ಬರೆದವರು ಶ್ರೀ ಬಸವರಾಜ ಅಂಗಡಿ, ಬಂಕಾಪೂರ.

ಬೆಲೆ:— ಒಂದು ರೂಪಾಯಿ.

# ಓದುಗರಲ್ಲಿ ವಿನಂತಿ

ಪ್ರಿಯ ವಾಚಕ ಮಹಾಶಯ ಬಂಧುಗಳೇ,

ಈ ಪುಸ್ತಕವು ಅತ್ಯಲ್ಪಾವಧಿಯಲ್ಲಿ ಪ್ರಕಟವಾಗಿರುವದಲ್ಲದೆ ಅವ
ಕೃತಿಯಾಗಿದೆ ತನ್ಮೂಲಕ "ಓದುವವ ತಪ್ಪುತ್ತಾನೆ. ಓದುವವ
ತ್ತಾನೆ. ಅಚ್ಚಿನಲ್ಲಿ ಮಳೆ ಹೊಂದಿಸುವವ ಹೊಳೆಯದೆ ಬಿಟ್ಟಿರುತ್ತಾ
ಎಂಬಂತೆ ಕೆಲವು ... ದೋಷಗಳು ಉಳಿದಿರುತ್ತವೆ ಕಾ
... ಕ್ಷಮಿಸಿ ಶಬ್ದಗಳನ್ನು ತಿದ್ದಿಕೊಂ
...ಾಯಕವಾಗುವ ಇನ್ನಾವ ಮಹತ್ವ
...ಳಾಸಕ್ಕೆ ಬರೆದು ತಿಳಿಸಿದಲ್ಲಿ ಮುಂದಿ
...ವೆನು ಮತ್ತು "ಸರ್ವಜ್ಞನೆಂಬು
...ಕೊಂದೊಂದು ನುಡಿಗಳಿತು ವಿದ್ಯೆದ
...ನ್ನು ಜಾಸಿಸಿ ನಿಮ್ಮಗಳ ಅಭಿಪ್ರಾಯ
... ಕೊಳ್ಳುವೆನು. ಕಾರಣ ಸಮಾಜ
...ನ್ನು ಹಿರಿಮೆಗೆ ತರುವದು ತಮ್ಮನ್ನೆ

ನಮಸ್ಕಾರ.

ಸಾಹಿತಿ, ಬಸವರಾಜ ಅಂಗ...
ಬಂಕಾಪೂರ.

# ಓದುಗರಲ್ಲಿ ವಿನಂತಿ

ಪ್ರಿಯ ವಾಚಕ ಮಹಾಶಯ ಬಂಧುಗಳೇ,

ಈ ಪುಸ್ತಕವು ಅತ್ಯಲ್ಪಾವಧಿಯಲ್ಲಿ ಪ್ರಕಟವಾಗಿರುವದಲ್ಲದೆ ಅ
ಕೃತಿಯಾಗಿದೆ ತನ್ಮೂಲಕ "ಓದುವವ ತಪ್ಪುತ್ತಾನೆ. ಓಡುವವ
ತ್ತಾನೆ. ಅಚ್ಚಿನಲ್ಲಿ ಮಳೆ ಹೊಂದಿಸುವವ ಹೊಳೆಯದೆ ಬಿಟ್ಟಿರುತ್ತಾ
ಎಂಬಂತೆ ಕೆಲವು ಅಕ್ಷರಗಳ ಲೋಪ-ದೋಷಗಳು ಉಳಿದಿರುತ್ತವೆ ಕಾ
ಓದುಗರಾದ ತಾವುಗಳು ದಯವಿಟ್ಟು ಕ್ಷಮಿಸಿ ಶಬ್ದಗಳನ್ನು ತಿದ್ದಿಕೊಂ
ಓದಬೇಕು. ಮತ್ತು ಈ ಕೃತಿಗೆ ಸಹಾಯಕವಾಗುವ ಇನ್ನಾವ ಮಹತ್ವ
ಸಂಗತಿಗಳಿದ್ದಲ್ಲಿ ಅವುಗಳನ್ನು ನನ್ನ ವಿಳಾಸಕ್ಕೆ ಬರೆದು ತಿಳಿಸಿದಲ್ಲಿ ಮುಂದಿ
ಕೃತಿಗೆ ತಪ್ಪದೇ ಅವುಗಳನ್ನು ಪ್ರಕಟಿಸುವೆನು ಮತ್ತು "ಸರ್ವಜ್ಞನೆಂಬು
ನೆ ? ಸರ್ವರೊಳೊಂದೊಂದು ನುಡಿಗಲಿತು ವಿದ್ಯೆದ
ಎಂಬುದನ್ನು ಪಾಲಿಸಿ ನಿಮ್ಮಗಳ ಅಭಿಪ್ರಾಯ
ಶೇಖರಿಸಿ ಕೊಳ್ಳುವೆನು. ಕಾರಣ ಸಮಾಜ
ನನ್ನು ಹಿರಿಮೆಗೆ ತರುವದು ತಮ್ಮನ್ನೇ

ನಮಸ್ಕಾರ.

—

ಸಾಹಿತಿ, ಬಸವರಾಜ ಅಂಗ
ಬಂಕಾಪೂರ.

॥ ಓಂ ॥

॥ ತೇಜಸ್ವಿನಾವಧೀತಮಸ್ತು ॥

ಬಸವರಾಜ ನಿಲಯದ ದ್ವಿತೀಯ ಪುಷ್ಪ !

ಶ್ರೀ ಮಜ್ಜಗದ್ಗುರು ರಂಭಾಪುರಿ, ವೀರ ಸಿಂಹಾಸನಾಧೀಶ್ವರ;

# ಪ್ರಸನ್ನ ರೇಣುಕ

## ವೀರ ಗಂಗಾಧರ ಮಹಾರಾಜೇಂದ್ರ

## ಶಿವಾಚಾರ್ಯರ

# ಜೀವನ ಚರಿತೆ.



# ಮುನ್ನುಡಿ

ಈ ಪುಸ್ತಕಕ್ಕೆ ಮುನ್ನುಡಿ ಬರೆಯಲೆತ್ನಿಸುವ ಮುನ್ನ ನನ್ನ ಜ್ಞಾನ ಡಿಯನ್ನು ಚೆನ್ನಾಗಿ ನೋಡಿಕೊಂಡಿದ್ದರೆ ನಾನು ಮುನ್ನುಡಿ ಬರೆಯಲು ಮುನ್ನುಗ್ಗುತ್ತಲೇ ಇರಲಿಲ್ಲ. ಏಕೆಂದರೆ ನನ್ನದನ್ನೇ ವಿಮರ್ಶಿಸಿ, ಕೊಳ್ಳ ಗದ ನಾನು ಇನ್ನೊಬ್ಬರ ಕೃತಿ ರತ್ನಗಳ ವಿಮರ್ಶೆಯನ್ನು ಎಷ್ಟರ ಟ್ಟಿಗೆ ಮುಟ್ಟಿಸಬಲ್ಲೆನೆಂಬುದರ ಬಗ್ಗೆ ಹೇಳಬೇಕಾದೀತೆ? ಆದರೂ ಮಿತ್ರ ಸವರಾಜರ ಒಲುಮೆಗೆ ಬಾಗಿ ಮುನ್ನುಡಿ ಬರೆಯುವ ಸಾಹಸ ಮಾಡಲೇ ಬೇಕಾಯಿತು !

ಮಾನವ ಜೀವಿ ಹುಟ್ಟಿಕೊಂಡೊಡನೆ, ಜೀವಿತದ ಯಥಾ ಯೋಗ್ಯ ಮಾರ್ಗವೂ ಹುಟ್ಟಲೇ ಬೇಕಾಯಿತು. ಅಂದರೆ ಮಾನವತೆಯ ಧರ್ಮ ನು? ಎಂಬುದನ್ನು ಜ್ಞಾನ ಸಂಪನ್ನ ಮಾನವನೇ ಹುಡುಕಿಕೊಳ್ಳಬೇಕಾ ತು. ಆ ಧರ್ಮದಿಂದ ಒಂದೊಂದು ವಿಚಾರದ ಜ್ಞಾನಿಗಳು ಬೇರೆ ಬೇರೆ ಾಗಿ ಸ್ವಲ್ಪ ಹೆಚ್ಚು ಕಡಿಮೆ ಮಾಡಿಕೊಂಡು ಕೆಲವು ಧರ್ಮಗಳನ್ನು ಮಾಡಿ ರು. ಅಂಥ ಸುಸಂಪನ್ನ ಧರ್ಮಗಳಲ್ಲಿ ವೀರಶೈವ ಧರ್ಮವೂ ಒಂದಾ ದೆ. ವೀರಶೈವ ಧರ್ಮವನ್ನು ಏಕಮಾನದ ಜನಾಂಗದಿಂದಲೇ ಬೇರ್ಪ ಸಿ, ಇದನ್ನು ಬೇರೂರಿಸಿದವರೈವರು. ಅವರೇ ಪಂಚಾಚಾರ್ಯರು ವರೇ ಪವಿತ್ರ ವೀರಶೈವ ಧರ್ಮದ ದೇವತಾ ಸ್ವರೂಪ ಸಂಸ್ಥಾಪಕರು. ಈ ಪೂಜ್ಯ ಪಂಚರಲ್ಲಿ ರಂಭಾಪುರಿಯ ರೇಣುಕರು ಅಗ್ರಗಣ್ಯರು! ಅಂದಿ ಂದ ಇಂದಿನ ವರೆಗೆ ಆ ಪರಮ ಪೂಜ್ಯ ರೇಣುಕರ ಮಠಕ್ಕೆ ವೀರಶೈವ ಧರ್ಮಜನ ಜಾಗೃತಿಗಾಗಿ. ಎಷ್ಟೋ ಸುಜ್ಞಾನಿ ತಪಸ್ವಿಗಳು ಅಧಿಕಾರ ವಹಿಸಿ, ಆ ಧರ್ಮಾನುಯಾಯಿಗಳಲ್ಲಿ ಉದ್ಭವಿಸುವ ಕಿಲ್ಮಿಷವನ್ನು ದಹಿಸುತ್ತ ಬಂದರು. ಅಂಥ ಪಾವನರಲ್ಲಿ ಈ ಗ್ರಂಥದ ಚರಿತ್ರನಾಯಕರೂ, ಈಗ ಅಧಿಕಾರದಲ್ಲಿರುವವರೂ ಆದ ಶ್ರೀ ವೀರ ಗಂಗಾಧರ ಮಹಾಸ್ವಾಮಿಗಳೂ ಒಬ್ಬರು.

ಇಂಥ ಮಹಾನ್ ವ್ಯಕ್ತಿಗಳ ಜೀವನ ಚರಿತೆ ಬರೆದ ಬಸವರಾ ಕೇವಲ ಭಾಷಾ ಸೇವೆಯ ಶ್ರೇಯಸ್ಸಲ್ಲದೆ, ವೀರಶೈವ ಸಮಾಜ ಸೇ ಯ ಶ್ರೇಯಸ್ಸು ಸಿಗುವದು. ಜೊತೆಗೆ ಆ ಪೀಠದ ವರದ ಹಸ್ತವು ಶಿರೋ ಕಮಲದ ಮೇಲೆ ಅವಿರತ ಇ..ವ..ತ್ತೆ; ಒ..ದು ತಪಸ್ಸನ್ನು ರಾಜರು ಮಾಡಿದರೆಂದು ಹೇಳಬಲ್ಲೆ; ಇವರ ಸೇವೆಗೆ ತಕ್ಕ ಸಹಾ ಸೌಕರ್ಯಗಳು ದೊರಕಿದಲ್ಲಿ ಇವರಿಂದ ಇನ್ನೂ ಹೆಚ್ಚಾಗಿ ಸಾಹಿತ್ಯಕ ಧಾ ನೈತಿಕ-ಶೈಕ್ಷಣಿಕ-ಸೇವೆಗಳನ್ನು ನಮ್ಮ ಸಮಾಜವು ಹೊಂದಬಲ್ಲದು; ಸೇವಾ ಸಂಪನ್ನ ಸದ್ಗುಣಿಗಳಾದ ಅಂಗಡಿ ಬಸವರಾಜರಿಗೆ ಉತ್ತರೋ ಅಭಿವೃದ್ಧಿಯ ಶುಭಾಶೀರ್ವಾದವು ಇದೇ ಗುರುಪುಂಗವ ಶ್ರೀ ವೀರ ಗಂ ಧರ ಮಹಾ ಸ್ವಾಮಿಗಳಿಂದ ದೊರಕಲೆಂದು ಹಾರೈಸುವ,

ಗದಗ

ತಮ್ಮ

೩೧—೧—೧೯೪೫ " ಕನ್ನಡ ರತ್ನ - ಕವಿ ತಿಲಕ " ಮಹಾಂತೇಶಶಾ

# ಪರಿವಿಡಿ.

ಅನುಕ್ರಮಣಿಕೆ

ಇಂಥ ಮಹಾನ್ ವ್ಯಕ್ತಿಗಳ ಜೀವನ ಚರಿತೆ ಬರೆದ ಬಸವರಾ
ಕೇವಲ ಭಾಷಾ ಸೇವೆಯ ಶ್ರೇಯಸ್ಸಲ್ಲದೆ, ವೀರಶೈವ ಸಮಾಜ ಸೇ
ಘನ ಶ್ರೇಯಸ್ಸು ಸಿಗುವದು. ಜೊತೆಗೆ ಆ ಪೀಠದ ವರದ ಹಸ್ತವು
ಶಿರೋ ಕಮಲದ ಮೇಲೆ ಅರ್ಪಿತ ಇ..ಪಂತೆ; ಒ..ಮು ತಪಸ್ಸನ್ನು
ರಾಜರು ಮಾಡಿದರೆಂದು ಹೇಳಬಲ್ಲೆ; ಇವರ ಸೇವೆಗೆ ತಕ್ಕ ಸಹಾ
ಸೌಕರ್ಯಗಳು ದೊರಕಿದಲ್ಲಿ ಇವರಿಂದ ಇನ್ನೂ ಹೆಚ್ಚಾಗಿ ಸಾಹಿತ್ಯಕ ಧಾ
ನೈತಿಕ-ಶೈಕ್ಷಣಿಕ-ಸೇವೆಗಳನ್ನು ನಮ್ಮ ಸಮಾಜವು ಹೊಂದಬಲ್ಲದು;
ಸೇವಾ ಸಂಪನ್ನ ಸದ್ಗುಣಿಗಳಾದ ಅಂಗಡಿ ಬಸವರಾಜರಿಗೆ ಉತ್ತರೋ
ಅಭಿವೃದ್ಧಿಯ ಶುಭಾಶೀರ್ವಾದವು ಇದೇ ಗುರುಪುಂಗವ ಶ್ರೀ ವೀರ ಗಂ
ಧರ ಮಹಾ ಸ್ವಾಮಿಗಳಿಂದ ದೊರಕಲೆಂದು ಹಾರೈಸುವ,

ಗದಗ ತಮ್ಮ
೩೧—೧—೧೯೪೯ " ಕನ್ನಡ ರತ್ನ - ಕವಿ ತಿಲಕ " ಮಹಾಂತೇಶಶಾ

# ಪರಿವಿಡಿ.

ಅನುಕ್ರಮಣಿಕೆ

ೋಟಿಯೇ ಭಸ್ಮವಾಗುವದು. "ಶಪಾದಪಿ, ಶರಾದಪಿ" ಎಂಬುವ ಶಕ್ತಿಯು
ಸನ್ನಿಧಿಯಲ್ಲಿ ಉಜ್ವಲವಾಗಿದೆ. ಇದೆಲ್ಲಕ್ಕೂ ಶ್ರೀ ಸನ್ನಿಧಿಯಲ್ಲಿರುವ
ಜ್ವಲ ಬ್ರಹ್ಮತೇಜಸ್ಸೂ ಶ್ರೀ ಶಿವಲಿಂಗನಿಷ್ಠೆಯೇ ಕಾರಣಗಳಾಗಿವೆ.

ಶ್ರೀ ಸನ್ನಿಧಾನದವರು ಶ್ರೀ ಶಿವಲಿಂಗ ಪೂಜೆಯನ್ನು ಎಷ್ಟು ಮಾಡಿ
ದರೂ ದಣಿಯರು ಮತ್ತು ತಣಿಯರು, ಇನ್ನೂ ಹೆಚ್ಚಾಗಿ ಶಿವಪೂಜೆ ಮಾಡ
ಬೇಕು; ಮಾಡಿಸಬೇಕು, ಶಿವಪೂಜೆಯು ಶಾಸ್ತ್ರೋಕ್ತವಾದ ರೀತಿಯಲ್ಲಿ
ಕ್ಕಾಗಬೇಕು. ಅದರಲ್ಲಿ ಒಂದಂಶವೂ ಕಡಿಮೆಯಾಗಬಾರದು. ಅಚು
ಕಟ್ಟಾದ ಪೂಜಾ ಸಾಮಾನುಗಳಿರಬೇಕೆಂಬುದೇ ಶ್ರೀ ಪೂಜ್ಯಪಾದರ
ಉದ್ದೇಶ. ಬೆಳ್ಳಿ-ಬಂಗಾರದ ಛತ್ರ-ಚಾಮರಾದಿ ರಾಜ ವೈಭವವೆಲ್ಲವೂ
ಅಡಂಬರದ ಕಳ್ಳ ವೈರಾಗಿಗಳದ್ದೆಂದು ಶಾಸ್ತ್ರಿಗಳು ನುಡಿಯುವದನ್ನು ಕಂಡರೆ
ಪರಮಾಶ್ಚರ್ಯವಾಗುತ್ತದೆ. ಅಸ್ತು!

ಪೂರ್ವಾಶ್ರಮದಿಂದ ಶ್ರೀಗಳು ದಯಾರ್ದ್ರವೃತ್ತಿಯಿಂದಲೂ-ಪೂಜಾ
ಪ್ರಭಾವದಿಂದಲೂ ಭೀಷ್ಮ ಬ್ರಹ್ಮಚರ್ಯ ತೇಜಸ್ಸಿನಿಂದಲೂ ಉತ್ತರೋ
ತ್ತರ ಅಭಿವೃದ್ಧಿಗೊಳ್ಳುವವನ್ನು ನೋಡಿಯೇ ಕೈ॥ ಶ್ರೀ ಜಗದ್ಗುರು ಶಿವಾ
ನಂದ ರಾಜೇಂದ್ರ ಶಿವಾಚಾರ್ಯ ಭಗವತ್ಪಾದರು ತಮ್ಮ ಉತ್ತರಾಧಿಕಾರಿಗಳ
ನ್ನಾಗಿ, ನಿಯಮಿಸಿದ್ದ ಕಾರಣೇ ನಾವೀಗ ಈಗಿನ ಈ ಮಹಾಚಾರ್ಯರ
ಪಾದ ಸೇವೆಯಿಂದ ಪುನೀತರಾಗುತ್ತಿದ್ದೇವೆ. ಅವರಲ್ಲಿ ಶ್ರೀ ಅಂಗಡಿಯವರು
ಪ್ರಥಮ ಭಕ್ತರಾಗಿದ್ದಾರೆ. ಈ ಲೇಖಕರ ಆತ್ಮಬಲವೇ ಶ್ರೀ ಸನ್ನಿಧಿಯ
ಸೇವೆಗೆ ನೆರವಾಗುವಂತೆ ಮಾಡಿದೆ. ಅವರಲ್ಲಿ ಆತ್ಮಬಲವಿಲ್ಲದಿದ್ದರೆ, ಶ್ರೀ
ಸನ್ನಿಧಿಯವರ ಸೇವೆಯು ಸಿಗದೆ ಯಾವದಾದರೊಂದು ಹೆಂಗುಸಿನ ಕಟ್ಟು
ಕಾದಂಬರಿಯ ಲೇಖಕರಾಗುತ್ತಿದ್ದರು. ಲೇಖಕರಿಗೆ ಪ್ರಸನ್ನಳಾದ ಶ್ರೀ ಸರ
ಸ್ವತಿದೇವಿಯು ಶ್ರೀ ಪ್ರಸನ್ನ ರೇಣುಕರ ಪ್ರಸಾದಕ್ಕೆ ಪಾತ್ರನನ್ನಾಗಿ ಮಾಡಿ
ದುದಕ್ಕಾಗಿ ಆನಂದ ಪಡಬೇಕಾಗಿದೆ. ಲೇಖಕರು ಕೇವಲ ಸ್ವಾರ್ಥಿಗಳಾಗದೆ
ತಮಗೆ ಪ್ರಾಪ್ತವಾದ ಪ್ರಸಾದವನ್ನು ಪರರಿಗೆ ಹಂಚಿದುದಕ್ಕೋಸುಗ ಧನ್ಯ
ವಾದವನ್ನೀಯಬೇಕಾಗಿದೆ.

ವೀರ ಪೀಠದ ವೀರ ಭಕ್ತರಾದ ಶ್ರೀ. ವೇ ವೀರಭದ್ರಯ್ಯನವರು
ಕಲ್ಯಾಣಮಠ ಬಂಕಾಪೂರ ಇವರು ಈ ಚರಿತ್ರೆಯನ್ನು ಸರ್ವರಿಗೂ ಹಸ್ತ

ಗತವಾಗುವ ಹಾಗೆ ಮಾಡಿದುದಕ್ಕೋಸ್ಕರ, ಅವರನ್ನು ಯಾವ ಶಬ್ದಗಳಿಂದ ವರ್ಣಿಸಿದರೂ ಅಲ್ಪವೇ ಆಗಿದೆ. ಕಲ್ಯಾಣಮಠದವರು, ಸರ್ವರ ಕಲ್ಯಾಣವನ್ನೇ ಕೋರುವದು. ಅವರ ಕರ್ತವ್ಯವಾಗಿದೆ. ಅದರಲ್ಲಿ ಕೈಗಡ ಶಬ್ದಗಳ ವರ್ಣನೆಯು ಏನು ಮಾಡೀತು ? ಶ್ರೀ ಕಲ್ಯಾಣಮಠದವರ ಬೆಂಬಲವು ದೊರೆಯ ಬೇಕಾದರೆ, ಶ್ರೀಯುತ ಅಂಗಡಿಯವರ ಆತ್ಮಬಲವೇ ಕಾರಣವಾಗಿದೆ.

ಶ್ರೀ ಚರಿತ್ರ ನಾಯಕರು ತಮ್ಮ ಪೂಜಾನುಷ್ಠಾನ ಬಲದಿಂದ ಸಿದ್ಧವಾದ ಚರಿತ್ರ ಬಲವನ್ನು ಶ್ರೀ ಅಂಗಡಿಯವರಿಗೆ ಆಶೀರ್ವದಿಸಿದರು. ನನ್ನಲ್ಲಾವ ಬಲವೂ ಇಲ್ಲ ನಾನಾವದನ್ನರ್ಪಿಸಲಿ, ಪೂಜ್ಯಪಾದರ ಚರಿತ್ರವನ್ನು ಓದಿ ಆನಂದಪಡುವ ಬಲವೊಂದೇ ಇರುತ್ತದೆ. ಅದನ್ನೇ ಅರ್ಪಿಸುವೆನು.

ಇತಿ ಶಿವಂ

ಶ್ರೀ. ಷ. ಬ್ರ. ಚೆನ್ನವೀರ ಶಿವಾಚಾರ್ಯ

ಹೋಟಗೀ ಬೃಹನ್ಮಠಾಧ್ಯಕ್ಷಃ

ಮು. ಸೋಲಾಪೂರ.

ಗಾಂಧೀ ದಹನ ಶಕೆ ೨

೩೧—೧—೧೯೪೯

## — ನವೀನ ಸಾಹಿತಿ. —



ಲೇಖಕರು :—

ಶ್ರೀ ಬಸವರಾಜ ಅಂಗಡಿ, ಬಂಕಾಪೂರ.

# ನನ್ನುಡಿ

ಸಾಹಿತ್ಯವೆ ಸರ್ವಮುಖಿ ಜ್ಞಾನದ ಒಂದು ಅಖಂಡವಾದ ಪ್ರವಾಹವು ಈ ಅಮರವಾದ ಜ್ಞಾನದ ಪ್ರವಾಹವು ವಿವಿಧ ಜನರಲ್ಲಿ ಅನೇಕ ಪ್ರಕಾರವಾಗಿ ವಿಚಾರ ಸಾಗರದಲ್ಲಿ ಹರಿಯುವದು. ಈ ಪ್ರವಾಹವು ವಿಶ್ವದಲ್ಲಿ ಅನಂತ ರೀತಿಯಿಂದ ತುಂಬಿದೆ.

ಶ್ರೀ ರೇಣುಕಾಚಾರ್ಯರ ಲೀಲೆಯಿಂದ ಶ್ರೀ ಜಗದ್ಗುರು ರಂಭಾಪುರಿ ಪ್ರಸನ್ನ ರೇಣುಕ ವೀರ ಗಂಗಾಧರ ಮಹಾ ಶಿವಾಚಾರ್ಯರ ಪ್ರಸನ್ನತೆಯಿಂದ ಶ್ರೀ ಷ. ಬ್ರ. ಹೊಟಗಿ ಚೆನ್ನವೀರ ಶಿವಾಚಾರ್ಯರ ಆಶೀರ್ವಾದದಿಂದ ಸಾಹಿತ್ಯಕಾರನಲ್ಲಿ ಅವ್ಯಕ್ತವಾಗಿ ಸಾಹಿತ್ಯರಸೋದಧಿಯ ತರಂಗಳು ಆತ್ಮನ ಚೆಲ್ವಿಕೆಯನ್ನು ಸುಂದರಗೊಳಿಸುವದರ ಫಲವಾಗಿಯೂ, ಮನಸ್ಸಿನ ಬಯಕೆಯನ್ನು ತೃಪ್ತಿಪಡಿಸುವದಕ್ಕಾಗಿಯೂ ಹೊರಸೂಸುತ್ತಿರುತ್ತವೆ.

ಕ್ಷೀರಸಾಗರದಲ್ಲಿ ಶಯನ ಮಾಡಿ ವಿಶ್ವದ ಲೀಲೆಗೋಸ್ಕರ ಚಿಂತಿಸುತ್ತಿರುವ ವಿಶ್ವೇಶನಂತೆ, ಅಮೃತ ಬಾವಿ ದಂಡೆಯ ಮೇಲೆ ಕುಳಿತು, ಅಮೃತ ಪಾನವನ್ನು ಮಾಡುತ್ತಿದ್ದ ದೇವತೆಗಳಂತೆ, ಪೂರ್ಣ ಹುಣ್ಣಿಮೆಯ ಸಮಯಕ್ಕೆ ಚಂದ್ರನಲ್ಲಿದ್ದ ಸುಧೆಯನ್ನು ಕುಡಿಯುವದಕ್ಕೋಸುಗ ಪ್ರಯತ್ನಿಸುತ್ತಿರುವ ನಕ್ಷತ್ರಗಳ ಸಮೂಹದಂತೆ ತಂಪಾದ ಸೊಂಪಾದ ಬಿಲ್ವವನದಲ್ಲಿಯ ಅನೇಕ ಸುಗಂಧ ಪುಷ್ಪಗಳ ಪರಿಮಳದ ಸುಗಂಧಕ್ಕೋಸ್ಕರ ಯತ್ನಿಸುತ್ತಿರುವ ಭ್ರಮರಗಳಂತೆ ಪ್ರಶಾಂತ ಕೊಳದಲ್ಲಿ ಸುಳಿ ಮೆಲ್ಲನೆ ಬೀಸುತ್ತಿರುವ ಮಂದ ಮಾರುತನ ಅಮೃತ ಮಯವಾದ ಉಸಿರನ್ನು ಸೇವಿಸುತ್ತಿರುವ ವನ ದೇವತೆಯಂತೆ ಬೆಳದಿಂಗಳ ಬೆಳಕಿನಲ್ಲಿ ಸೌಮ್ಯ ರೂಪದಿಂದ ಬರುತ್ತಿದ್ದ ತರಂಗಗಳಿಂದುದ್ಭವಿಸಿದ ಸಾಹಿತ್ಯ ಸುಧೆಯನ್ನು ಕುಡಿ ಕುಡಿದು ಲೌಕಿಕದ ಭಾರವನ್ನು ಕಡಿಮೆ ಮಾಡಿಕೊಳ್ಳುವದಿಲ್ಲವೇ ?

ಅಂತೆಯೇ ಪ್ರಪಂಚದ ಭಾರವನ್ನು ಕಡಿಮೆ ಮಾಡುವಂಥ ಸಾಹಿತ್ಯ ಝುರಿಯು ಎಲ್ಲೆಡೆಯಲ್ಲಿಯೂ ಒಂದೇ ಸವನೇ ಒಂದಿಲ್ಲೊಂದು ರೀತಿಯಿಂದ ತುಂಬಿ ಹರಿಯುತ್ತಿರುತ್ತದೆ. ಇಂತಹ ಸಾಹಿತ್ಯ ಝುರಿಯ ಹರಿಯುವಿಕೆಯ

ಪ್ರವಾಹದಲ್ಲಿ ಒಂದು ತೆರೆ ತೆರೆಯಾಗಿ ಹೊರ ಹೊಮ್ಮಿದೆ, ಶ್ರೀ ಒಂದು ಸಾವಿರದಾ ಎಂಟು ಶ್ರೀ ಮದ್ರಂಭಾಪುರಿ ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಮಹಾ ರಾಜೇಂದ್ರ ಶಿವಾಚಾರ್ಯರ ಚರಿತೆಯು; ಈ ಚರಿತೆಯು ಅನುಪಮವಾದುದು. ಅಮರವಾದುದು, ಇದರಲ್ಲಿಯೇ ಯೋಗಿವರ್ಯರ ಬೆಳಕು ತುಂಬಿಹೋಗಿದೆ

ಪರಮಾತ್ಮನ ಹಾಗೂ ಕೈ॥ ಜಗದ್ಗುರು ಶಿವಾನಂದ ಶಿವಾಚಾರ್ಯರ ಕೃಪಾಶೀರ್ವಾದಗಳಿಂದ ಪಾಲಿಕೊಪ್ಪದ ಗಂಗಾಧರ ಶಿವಾಚಾರ್ಯರಿಗೆ ರಂಭಾಪುರಿ ಪೀಠದ ಅಧಿಕಾರ ದೊರೆತು ಜಗದ್ಗುರು ಪ್ರಸನ್ನ ರೇಣುಕರಾಗಿ ಸಿಂಹಾಸನವನ್ನಲಂಕರಿಸಿ, ಪಂಚಪೀಠಗಳ ಮತ್ತು ವೀರಶೈವ ಸಮಾಜದ ಅಭಿವೃದ್ಧಿಯನ್ನೇ ಧ್ಯೇಯವನ್ನಾಗಿಟ್ಟುಕೊಂಡ ಪೀಠಾಚಾರ್ಯರ ಈ ಮಹಾ ಚರಿತೆಯನ್ನು ಎಲ್ಲರೂ ಓದಿ ನಾಲಿಗೆಯನ್ನು ಪವಿತ್ರವನ್ನಾಗಿ ಮಾಡಿಕೊಂಡು; ಪಾವನರಾಗುವಾ !

ಈ ಚರಿತ್ರೆಯನ್ನು ಬರೆಯಲು ನಾನೇನು ಯತ್ನಿಸಿದವನಲ್ಲ ಶ್ರೀ ಹೋಟಗಿ ಚೆನ್ನವೀರ ಶಿವಾಚಾರ್ಯರು ಬಂಕಾಪುರಕ್ಕೆ 'ಬಂದಾಗ ಪರಿಚಯವಾಗಿ ಅವರು ನನ್ನ ಸ್ಫೂರ್ತಿಸಿಂಹಾಸನದಲ್ಲಿ ಮೂರ್ತಿಗಳಾಗಿ ನೆಲಿಸಿ, ನನ್ನ ಲೇಖನ ವ್ಯವಸಾಯಕ್ಕೆ ಮೇಲೆ ಮೇಲೆ ಹುರುಪು ಬರುವಂತಹ ಓಲೆಗಳನ್ನು ಬರೆದು ಪ್ರೋತ್ಸಾಹ ಕೊಟ್ಟು ಈ ಹೊತ್ತಗೆಯನ್ನು ಹೊರಡಿಸಿದ್ದಾಗಿದೆ.

ನನಗೆ ಗೊತ್ತಿದ್ದ ಸಂಗತಿಗಳ ಹೊರತಾಗಿ ಈ ಚರಿತ್ರೆಗೆ ಬೇಕಾದ ಅಲ್ಪ ಸ್ವಲ್ಪ ಮಾಹಿತಿಯನ್ನು ಶ್ರೀ ಪಂಡಿತ ಹರೀಶ್ವರ ಶಾಸ್ತ್ರಿಗಳು ರಂಭಾಪುರಿ ಪೀಠದ ಎಜೆಂಟರು ತಕ್ಕ ಹೊತ್ತಿಗೆ ಹೇಳಿ ಕೊಟ್ಟು ಸಹಾಯ ಸಲ್ಲಿಸಿದ್ದಾರೆ. ಮತ್ತು ಶ್ರೀ. ವೇ. ಪಕ್ಕೀರಯ್ಯನವರು ಹಿರೇಮಠ ಬಂಕಾಪೂರ ಇವರು ರಂಭಾಪುರಿ ಪೀಠದ ನಾಡಿನ ಚಿತ್ರವು ನನ್ನ ಮನದಲ್ಲಿ ಮೂಡುವಂತೆ ತಿಳಿಸಿ ಕೊಟ್ಟಿದ್ದಾರೆ. ಅಲ್ಲದೆ ಶ್ರೀ ಚನ್ನಬಸವಾರ್ಯ ಹೂಲಿ ಕಂಠಿಮಠ ಬಂಕಾಪೂರ ಇವರು ಬೆಂಗಳೂರ ಮಹಾಂತೀನಮಠದಲ್ಲಿ ವಿದ್ಯಾರ್ಥಿಗಳಾಗಿ, ಜಗದ್ಗುರುಗಳ ಶಿಷ್ಯರಾಗಿ. ವೇದಾಧ್ಯಯನ ಮಾಡುತ್ತಿದ್ದು ನನ್ನ ಬಾಲ್ಯ ಸ್ನೇಹಿತರಾಗಿದ್ದು ಸನ್ನಿಧಿಯವರ ವಿಶೇಷ ಮಾಹಿತಿಯನ್ನು ಹೇಳಿ

ಸಹಾಯಕರಾಗಿದ್ದಾರೆ. ಹಾಗೂ ಶ್ರೀ. ಕೆ. ಎಂ. ಕರಸಿದ್ದಯ್ಯ ಶಾಸ್ತ್ರಿಗಳು ಜಗದ್ಗುರುಗಳ ಸೇವೆಯನ್ನು ಮೊದಲಿನಿಂದ ಮಾಡುತ್ತಿದ್ದು ಅವರು ಚಿರ ಪರಿಚಿತರಾಗಿದ್ದರಿಂದ ನಾನು ಬರೆದ ಚರಿತೆಯನ್ನು ಓದಿ ನೋಡುತ್ತ ಸನ್ನಿವೇಶಗಳಿಗೆ ತಕ್ಕ ಪ್ರೋತ್ಸಾಹಕರಾಗಿದ್ದಾರೆ ಮತ್ತು ಶ್ರೀ ಪುಟ್ಟಯ್ಯಸ್ವಾಮಿ ಹಿರೇಮಠ ಹರ್ಲಾಪುರ ಇವರು ಮುಕ್ತಿಮಂದಿರದ ವಿಶೇಷ ಮಾಹಿತಿಯನ್ನು ಹೇಳಿಕೊಟ್ಟು ಸಹಾಯ ಸಲ್ಲಿಸಿದ್ದಾರೆ. ಶ್ರೀ ವೀರಭದ್ರಯ್ಯನವರು ಕಲ್ಯಾಣ ಮಠ ಬಂಕಾಪೂರ ಇವರು ಶ್ರೀ ಜಗದ್ಗುರು ಪ್ರಸನ್ನ ರೇಣುಕರ ಚರಿತ್ರೆಯನ್ನು ಬರೆಯಿರಿ ನಾವು ಪ್ರಕಟಿಸಿ ಪ್ರಚಾರ ಮಾಡುವೆವೆಂದು ಭರವಸೆ ಕೊಟ್ಟು ಉಚಿತ ಸಹಾಯ ಸಲ್ಲಿಸಿ ಉಪಕೃತರಾಗಿದ್ದಾರೆ. ಈ ಎಲ್ಲ ಮಹನೀಯರಿಗೂ ಶ್ರೀ ಹೋಟಗಿ ಚೆನ್ನವೀರ ಶಿವಾಚಾರ್ಯರಿಗೂ ಮತ್ತು ಚೊಕ್ಕದಾದ ಚಿಕ್ಕ ಮುನ್ನುಡಿಯನ್ನು ಬರೆದು ಕೊಟ್ಟ ಕನ್ನಡ ರತ್ನ "ಕವಿತಿಲಕ" ಮಹಾಂತೇಶ ಶಾಸ್ತ್ರಿಗಳು ಗದಗ ಅವರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸಿ ಶುಭಾಶಯವನು ಕೋರುವೆನಲ್ಲದೆ, ಇವರೆಲ್ಲರ ಆಭಾರವನ್ನು ಅತ್ಯಂತ ಮನಃಪೂರಕವಾಗಿ ಮನ್ನಿಸಿ ಧನ್ಯನಾಗುವೆ; ಮತ್ತು ತಕ್ಕ ಹೊತ್ತಿಗೆ ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀ ಪಿ ಜಿ ಮಾಗಡಿ, ಮಲ್ಲಿಕಾರ್ಜುನ ಪ್ರಿಂಟಿಂಗ ವರ್ಕ್ಸ, ದುರ್ಗದಬೈಲ ಹುಬ್ಬಳ್ಳಿಯ ಒಡೆಯರಿಗೂ ನನ್ನ ಅಭಿನಂದನೆಗಳನ್ನು ಸಲ್ಲಿಸಿ, ಲೇಖನಿ ನಿಕ್ಷೇಪಿಸುವೆ !

ವಂದೇ ರೇಣುಕಂ !

ಬಂಕಾಪೂರ
ತಾ. ೨೨—೨—೪೯

ತಮ್ಮೆಲ್ಲರ ಸಾಹಿತ್ಯಸೇವಕ
ಬಸವರಾಜ ಅಂಗಡಿ : ಬಂಕಾಪೂರ

# ನಮಿಪೆ ಗುರುವೆ !

ನಮಿಪೆ ಗುರುವೆ ಮಮ ಭಾಗ್ಯಸಿಧಿಯೇ ।
ಓ ! ಜಗದ್ಗುರುವೆ ! ಗಂಗಾಧರ ಶಿವಯೋಗಿ ।
ಪ್ರೇಮ ವಂದನೆ ಗೈವೆ ದೇವ । ಲಿಂಗ ಸಮರಸ ಭಾವ ॥
ಭಾವ । ಲಿಂಗ ಸಮರಸ ಭಾವ ॥೧॥

ಆ ಪಾಲಿಕೊಪ್ಪದೊಳವತರಿಸಿ । ಬಾಲ ಲೀಲೆಯಿಂ ಶಿಕ್ಷಣ ಮುಗಿಸಿ ।
ಮಮ ಮಠದೊಳು ಅಧಿಕಾರ ವಹಿಸಿ । ರೇಣುಕಧ್ವಜವನು ಮೆರೆಸಿ ।
ಮೆರೆಸಿ । ರೇಣುಕಧ್ವಜವನು ಮೆರೆಸಿ ॥೨॥

ದೇಶವ ಚರಿಸಿ । ಭಕ್ತರ ಹರಸಿ ।
ಮಹಿಯೊಳ್ ಮಹಾಂತ ಮಠೇಂದ್ರ ।
ಮುಕ್ತಿ ಮಂದಿರ ಜಾತಯಿಂದ್ರ । ಶ್ರೀ ಗಂಗಾಧರೇಂದ್ರ ।
ಇಂದ್ರ । ಗಂಗಾಧರೇಂದ್ರ ॥೩॥

ಮಠದೊಳು ವೈಷಮ್ಯ ಮೂಡಿ ।
ಅಳಿದು ಸುಧರ್ಮ ಸಾಡಿ । ವೀರಶೈವರುದ್ಧಾರ ಮಾಡಿ ।
ಇಂದೇ ಮೆರೆಯುವಿ ನೋಡಿ । ನೋಡಿ ।
ಇಂದೇ ಮೆರೆಯುವಿ ನೋಡಿ ॥೪॥

ಶ್ರೀ ರಂಭಾಪುರಿಯ ಪೀಠಧ್ವಜ । ಉರ್ವಿಯೋಳೆಸೆ ಪಡೆವುದು ಸಹಜ ।
ಸರ್ವ ಭಕ್ತಹಿತ ಗೈವುದು ನಿಜ । ಪ್ರಸನ್ನರೇಣುಕ ಧ್ವಜ ।
ಧ್ವಜ । ಪ್ರಸನ್ನ ರೇಣುಕ ಧ್ವಜ ॥೫॥

— ಬಸವರಾಜ ಅಂಗಡಿ ಬಂಕಾಪೂರ

# ಕೋರಿಕೆ



ಆದಿಯಲಿ ಜಗದಾದಿ ದೈವಂಘ ನಮಿಸಿ
ನುಡಿಗೆ ನಾಡಿಗೆ ಶುಭವ ನೀಡೆಂದು ಬೇಡಿ,
ಸದ್ಯದಲಿ ವೀರ ಶಿವ ಧರ್ಮಕಾಗಿ ಸಲೆ ಶ್ರಮಿಸಿ
ಧನ್ಯತೆಯೊಳಾಳುವ ಗುರುಗಳ ಹೆಸರ ಹಾಡಿ
ಧರ್ಮಾರ್ಥ ಮೋಕ್ಷೋಪಾಸ ಕಾಲಕೆ ಮಣಿದು
ನೆರವಿಗರು ಆರ್ಯ ಮಿತ್ರರಿಗೆ ಕೈ ಮುಗಿದು
ಬರೆಯಲಿರುವೆನು ಜಗದ್ಗುರುಗಳ
ಚರಿತೆಯೊಂದಿದನು ನನ್ನಾಶಯುವ ಬಗೆದು
ಗುಣವಿಹುದುಕೊಂಡು ಸೂಚನೆಯ ಮಾಡಿ
…ಂಘಗಳೇ ನನ್ನ ನೀ ದಿನ ಅನುಗ್ರಹಿಸಿ !

ಬಸವರಾಜ ಅಂಗಡಿ ಬಂಕಾಪೂರ

# ನಮಿಪೆ ಗುರುವೆ !

ನಮಿಪೆ ಗುರುವೆ ಮಮ ಭಾಗ್ಯಸಿಧಿಯೇ ।
ಓ । ಜಗದ್ಗುರುವೆ ! ಗಂಗಾಧರ ಶಿವಯೋಗಿ ।
ಪ್ರೇಮ ವಂದನೆ ಗೈವೆ ದೇವ । ಲಿಂಗ ಸಮರಸ ಭಾವ ॥
ಭಾವ । ಲಿಂಗ ಸಮರಸ ಭಾವ ॥೧॥

ಆ ಪಾಲಿಕೊಪ್ಪದೊಳವತರಿಸಿ । ಬಾಲ ಲೀಲೆಯಿಂ ಶಿಕ್ಷಣ ಮುಗಿಸಿ ।
ಮಮ ಮಠದೊಳು ಅಧಿಕಾರ ವಹಿಸಿ । ರೇಣುಕಧ್ವಜವನು ಮೆರೆಸಿ ।
ಮೆರೆಸಿ । ರೇಣುಕಧ್ವಜವನು ಮೆರೆಸಿ ॥೨॥

ದೇಶವ ಚರಿಸಿ । ಭಕ್ತರ ಹರಿಸಿ ।
ಸುಖಿಯೋಳ್ ಪ್ರಶಾಂತ ಮಠೇಂದ್ರ ।
ಸುಕ್ತಿ ಮಂದಿರ ಜಾತಯಿಂದ್ರ । ಶ್ರೀ ಗಂಗಾಧರೇಂದ್ರ ।
ಇಂದ್ರ । ಗಂಗಾಧರೆಂದ್ರ ॥೩॥

ಮಠದೊಳು ವೈಷಮ್ಯ ಮಾಡಿ ।
ಅಳಿದು ಸುಧರ್ಮ ಪಾಡಿ । ವೀರಶೈವರುದ್ಧಾರ ಮಾಡಿ ।
ಇಂದೇ ಮೆರೆಯುವ ನೋಡಿ । ನೋಡಿ ।

ಇಂದೇ ಮೆರೆಯುವಿ ನೋಡಿ ॥೪॥
ಶ್ರೀ ರಂಭಾಪುರಿಯ ಪೀಠಧ್ವಜ । ಉರ್ವಿಯೋಳೆಸೆ ಪಡೆವುದು ಸಹಜ ।
ಸರ್ವ ಭಕ್ತಹಿತ ಗೈವುದು ನಿಜ । ಪ್ರಸನ್ನರೇಣುಕ ಧ್ವಜ ।
ಧ್ವಜ । ಪ್ರಸನ್ನ ರೇಣುಕ ಧ್ವಜ ॥೫॥

— ಬಸವರಾಜ ಅಂಗಡಿ ಬಂಕಾಪೂರ

# ಕೋರಿಕೆ



ಆದಿಯಲಿ ಜಗದಾದಿ ದೈವರ್ಷಿ ನಮಿಸಿ
ನುಡಿಗೆ ನಾಡಿಗೆ ಶುಭವ ನೀಡೆಂದು ಬೇಡಿ,
ಸದ್ಯದಲಿ ವೀರ ಶಿವ ಧರ್ಮಕಾಗಿ ಸಲೆ ಶ್ರಮಿಸಿ
ಧನ್ಯತೆಯೊಳಾಳುವ ಗುರುಗಳ ಹೆಸರ ಹಾಡಿ
ಧರ್ಮಾರ್ಥ ಮೋಕ್ಷೋಪಾಸ ಕುಲಕೆ ಮಣಿದು
ನೆರವಿಗರು ಆರ್ಯ ಮಿತ್ರರಿಗೆ ಕೈ ಮುಗಿದು
ಬರೆಯಲಿರುವೆನು ಜಗದ್ಗುರುಗಳ
ಚರಿತೆಯೊಂದಿದನು ನನ್ನಾಶಯವ ಬಗೆದು
ಗುಣವಿಡುದುಕೊಂಡು ಸೂಚನೆಯ ಮಾಡಿ
ಬಂಧುಗಳೇ ನನ್ನನೀ ದಿನ ಅನುಗ್ರಹಿಸಿ !

ಬಸವರಾಜ ಅಂಗಡಿ ಬಂಕಾಪೂರ



# ನಿವೇದನೆ

ಈ ಲೋಕದಲ್ಲಿ ಬದ್ಧರೆಂದೂ-ಸಿದ್ಧರೆಂದೂ ಎರಡು ಪ್ರಕಾರದ ಪುರುಷರುಂಟು ಇವರಲ್ಲಿ ಹಾಳಾಗಿ ಹೋಗುವ ಹೊನ್ನು-ಹೆಣ್ಣು-ಮಣ್ಣು ನನ್ನವೆಂದು ತಿಳಿದು ಮೋಹಿಸಿ, ಕಟ್ಟ ಕಡೆಗೆ ಕಷ್ಟಕ್ಕೀಡಾಗುವವನು ಬದ್ಧನು. ಇವೆಲ್ಲವೂ ಅಸ್ಥಿರವೆಂದು ಬಗೆದು ತುಚ್ಛ ಮಾಡಿ ತುಳಿದು ಮುಂದೆ ಮನಸ್ಸು ಮೋಹಿಸದವನು ಸಿದ್ಧನು ಈತನಿಗೆ ನಿತ್ಯ ಶುದ್ಧ ಬದ್ಧನೆಂಬ ಎಚ್ಚರವು ಯಾವಾಗಲೂ ತಪ್ಪಳಿಯದಂತೆ ಇರುವದು. ಇವೆಲ್ಲವೂ ರೇಣುಕನ ಸಂಕಲ್ಪದಿಂದಲೇ ಆಗುವದೆಂಬ ವಿಶ್ವಾಸವು ಈತನಲ್ಲಿರುವದು. ಸರ್ವ ಪ್ರಾಣಿಗಳಲ್ಲಿ ಆತ್ಮನಿದ್ದನೆಂಬ ಜ್ಞಾನವು ಆತನಲ್ಲಿ ಸ್ಥಿರವಾಗಿ ನೆಲೆಸಿರುವದು ಅದ್ದರಿಂದ ಇವುಗಳ ಬಗ್ಗೆ ಈತನಲ್ಲಿ ಸಮತ್ವ ಬುದ್ಧಿ ಇರುತ್ತದೆ. ಅಂಜಿಕೆ-ನಾಚಿಕೆ-ಹೇಸಿಕೆ-ಸಿಟ್ಟು- ಆಸೆ ಸೊಕ್ಕು- ಹೊಟ್ಟೆಕಿಚ್ಚು ಅಲ್ಲದೆ ರಾಗ ದ್ವೇಷ-ಸುಖ-ದುಃಖ-ಮಾನಾಪಮಾನ ಇವಾವವೂ ಈತನಲ್ಲಿ ತಲೆದೋರುವದಿಲ್ಲ ಒಂದು ವೇಳೆ ತೋರಿದರೂ ಅವು ಈತನಿಗೆ ಸಂಬಂಧಿಸಲಾರವು. ಯಾಕಂದರೆ ಮೋಡವು ಮುಗಿಲಲ್ಲಿ ಹುಟ್ಟಿ ತೋರಿದರೂ ಅದು ಅದಕ್ಕೆ ಅಂಟಿಕೊಳ್ಳುವದಿಲ್ಲವಷ್ಟೇ ? ಹಾಗೆಯೇ ಈ ಸಿದ್ಧಯೋಗಿವರ್ಯನ ಸ್ಥಿತಿ ಇರುವದು.

ಇಂಥವರಲ್ಲಿ ವಿಶೇಷ ಮತ್ತು ಸಾಮಾನ್ಯ ಎಂದು ಎರಡು ವರ್ಗಗಳನ್ನು ಮಾಡಬಹುದು. ವಿಶೇಷ ಸಿದ್ಧನೆಂದರೆ ಲೋಕ ಕಲ್ಯಾಣಕ್ಕಾಗಿ ಜನ್ಮ ತಾಳಿದವನು ಅವನ ಆಚರಣೆಗಳು ಮಾತ್ರ ಎಲ್ಲರೂ ನೋಡಿ ಕಲಿಯುವಂಥವು. ಆಯಾಯ ಸಮಾಜದ ಇಲ್ಲವೆ ಆಯಾಯ ದೇಶದ ಜನರ ಉದ್ಧಾರಕ್ಕಾಗಿಯೇ ಅವನ ಆಚಾರಗಳಿರುತ್ತವೆ. ಅವನು ಆದರ್ಶ ಗುರುವಿನಂತೆ, ಪಿತನಂತೆ, ಯತಿಯಂತೆ, ಸಖನಂತೆ, ವೀರನಂತೆ, ದೇಶಾಭಿಮಾನಿಯಂತೆ, ಧರ್ಮಾಭಿಮಾನಿಯಾಗಿ ವರ್ತಿಸಿ ಎಲ್ಲರಿಗೂ ಮಾರ್ಗದರ್ಶಕನಾಗಿ ಇಹದ ಯಾತ್ರೆ ಮುಗಿಸುವನು. ಈ ವರ್ಗದವರೊಳಗಿನವರೆಂದರೆ— ಕಾಶಿ-ಕೇದಾರ ಶ್ರೀಶೈಲ-ಉಜ್ಜಯನಿ-ರಂಭಾಪುರಿ ಮುಂತಾದ ಯೋಗಿ ಗುರುವರ್ಯ ಮೊದಲಾದವರು.

ಸಾಮಾನ್ಯ ಸಿದ್ಧರೆಂದರೆ ಆತನ ನಡೆ-ನುಡಿಗಳಲ್ಲಿ ಎರಡನೆಯವರು ಕಲಿತುಕೊಳ್ಳುವಂತಹದೇನೂ ಕಂಡು ಬರುವದಿಲ್ಲ ಏಕೆಂದರೆ ಆತನ ಸಿದ್ಧಿಯು ಆತನ ಪೂರ್ತಿಯೇ ಇರುವದು. ಆದಕಾರಣ ಆತನ ಆಚರಣೆಯನ್ನು ನೋಡಿ ಅನ್ಯರು ಅದೇ ರೀತಿ ವರ್ತಿಸಬೇಕೆಂಬ ಈಶ ಸಂಕಲ್ಪವಿರುವದಿಲ್ಲ ಬಹಳವೆಂದರೆ ಒಬ್ಬಿಬ್ಬ ಶಿಷ್ಯರಿಗೆ ಮಾತ್ರ ತಾನು ಪಡೆದ ಆತ್ಮಾನಂದ ಮಾರ್ಗವನ್ನು ಆವನು ತೋರಿಸಿ ಕೊಡಬಹುದು.

ಇಂತಹ ಸಿದ್ಧಿ ಪುರುಷನು ದಿಗಂಬರನೇ ಇರಲಿ, ಮತ್ತಾವ ತರದ ಬಟ್ಟೆಯನ್ನೇ ಹೊರಲಿ, ಜಟಾಕೌಪಿನಿಯೇ ಇರಲಿ, ಅವನು ಯಾವಾಗಲೂ ನಿಜಾನಂದದಲ್ಲಿದ್ದು ದೇವನಂತೆ- ತಪಸ್ವಿಯಂತೆ- ಯೋಗಿಯಾಗಿ ಆಚರಿಸುತ್ತ ಲೋಕದಲ್ಲಿ ಸಂಚರಿಸುತ್ತಿರುವನು. ಇಂಥವರಿಗೆ ಸಿದ್ಧಪುರುಷರೆನ್ನಬೇಕು. ಇವರಿಗೆ ಆತ್ಮಕ್ರೀಡಾ-ಆತ್ಮರತಿ-ಆತ್ಮಾನಂದ ಇವುಗಳ ಸುಖವು ಅಂತರಂಗದಲ್ಲಿ ಯಾವಾಗಲೂ ಅಚ್ಚಳಿಯದೇ ಇರುವದು. ಅಂತೇ ಅವರು ಸುಖ-ದುಃಖಗಳಿಗೆ ಒಳಗಾಗರು. ಅಹಿಂಸೆ-ಸತ್ಯ-ಅಸ್ತೇಯ ಬ್ರಹ್ಮಚರ್ಯ ಮೊದಲಾದ ಸದ್ಗುಣಗಳಿಂದ ಸದಾ ಕೂಡಿದವರೂ ಗುಣಾಗುಣೇಷು ವರ್ತಂತೆ, ಅಂದರೆ ಗುಣದೋಷಗಳಲ್ಲಿ ಅವನು ಸಮಾನುಭಾವದಿಂದ ವರ್ತಿಸುತ್ತಾನೆ. ಆದ್ದರಿಂದ ಆತನು ಕಾರ್ಯಾ ಕಾರ್ಯಗಳಿಗೆ ಸಾಕ್ಷಿಭೂತನಾಗಿ, ಕರ್ಮಕ್ಕೂ-ಕರ್ಮದ ಫಲಕ್ಕೂ ಬದ್ಧನಾಗದೆ ನೀರಲ್ಲಿದ್ದ ತಾವರೆಯ ಎಸಳಿನಂತೆ, ನಿರ್ಲಿಪ್ತನಾಗಿರುವನು ಅವನು ಸರ್ವದಾ ಶಿವಾನಂದದಲ್ಲಿ ಇರುವದರಿಂದ ಇಂಥವನಿಗೆ ಗುರುತರವಾದ ಉಳಿದ ದುಃಖಗಳಾವವೂ ಸೋಂಕಲಾರವು. ನಮ್ಮ ಜಗದ್ಗುರು ಪ್ರಸನ್ನ ರೇಣುಕರೂ ಇದೇ ವರ್ಗದೊಳಗಿನವರೇ !

ಇವರ ಚರಿತ್ರವು ನವರಸಗಳಿಂದ ಬಹಳ ಮನೋರಂಜಕವಾಗಿದೆ ಭಕ್ತಿಪ್ರದವಾಗಿದೆ. ಎಷ್ಟು ಬಾರಿ ಓದಿದರೂ ಬೇಸರಾಗುವದಿಲ್ಲ ಒಮ್ಮೆ ಓದಿ ಮುಗಿಸಿದರೂ ಮತ್ತೊಮ್ಮೆ ಓದ ಬೇಕೆನ್ನಿಸುವದು. ಓದಲು ಸುರುವು ಮಾಡಿದರೆ ಮುಗಿಸಿಯೇ ಕೆಳಗಿಡಬೇಕೇ ಹೊರ್ತು ನಡುವೆ ಬಿಡುವಂತಿಲ್ಲ ಇಷ್ಟು ಸವಿ ಕಟ್ಟಾಗಿದೆ. ಈ ಚರಿತ್ರವು ಒಟ್ಟಾರೆ ಇದರಿಂದ ಕಲಿಯತಕ್ಕ ಗುಣಗಳಾವುವೆಂದರೆ ಧರ್ಮ-ಲಿಂಗಪೂಜೆ-ಧೈರ್ಯ-ಸ್ಥೈರ್ಯ-ವೀರ್ಯ-ಬ್ರಹ್ಮಚರ್ಯ-ಸಾಹಸ-ಯೋಗ- ಸಹಿಷ್ಣುತೆ ಸ್ತುತಿ- ಸಮಾಜ ಸುಧಾರತೆ

ಮೊದಲಾದ ಶ್ರೇಷ್ಠ ಗುಣಗಳು ಮತ್ತು ಅಹಿಂಸೆ, ಸತ್ಯ, ಅಸ್ತೇಯ, ದಯಾ, ಶಾಂತಿ, ದಾಂತಿ, ಸಚ್ಚಿಂತತೆ ಮುಂತಾದ ಉದಾತ್ತ ಆಚರಣೆಗಳು ಇವೆಲ್ಲವೂ ಇವರಲ್ಲಿ ಸ್ಥಿರವಾಗಿ ನೆಲೆಸಿರುವರಿಂದ ನಮ್ಮ ನಾಡಿನ ವೀರಶೈವರಷ್ಟೇ ಅಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮುಸಲ್ಮಾನರಾದಿಯಾಗಿ ಎಲ್ಲರಿಗೂ ಇವರು ವಂದ್ಯರಾಗಿದ್ದಾರೆ. ಈಗ ಮಿನುಗು ದೀವಿಗೆಯಂತೆ, ಪ್ರತ್ಯಕ್ಷವಾಗಿ ನಮ್ಮೆದುರು ಬೆಳಗುತ್ತಲಿದ್ದಾರೆ. ಈ ಬೆಳಕಿನಲ್ಲಿ ನಮ್ಮ ಹುಳುಕನ್ನು ಹುಡುಕಿ ಕಳೆದುಕೊಂಡರೆ ಒಳಿತಲ್ಲವೆ ?

ನಾನು ಕಣ್ಣಾರೆ ಕಂಡ, ನೋಡಿದ, ಹಿರಿಯರು ಹೇಳಿದ, ಪರಂಪರೆಯಿಂದ ಕೇಳಿದ ಸಂಗತಿಗಳನ್ನು ನೆನೆದು ಈ ಪುಣ್ಯಪುರುಷರ ಜಗದ್ಗುರುಗಳ ಜೀವನ ಚರಿತೆಯನು ಬರೆದಿರುವೆನು ಇವರ ಸಂಬಂಧವಾದ ಮಹತ್ವದ ವಿಷಯಗಳು ಇನ್ನೂ ಇದ್ದರೆ ಅವುಗಳನ್ನು ತಿಳಿಸಿದರೆ ದಯವಿಟ್ಟು ಸೇರಿಸಿ ಬರುವೆನು:

ವೀರಶೈವರೆಲ್ಲರೂ ಒಟ್ಟಾಗಿ ಕನ್ನಡಿಗರೆಲ್ಲರೂ ಇಂಥವರ ಪುಣ್ಯ ಚರಿತ್ರೆಯನ್ನು ಓದಿ ಮನಸ್ಸನ್ನು ಪವಿತ್ರವನ್ನಾಗಿ ಮಾಡಿಕೊಳ್ಳಲೆಂದು ಹಾರೈಸುವ.

ಲೇಖಕ:—

ಬಸವರಾಜ ಅಂಗಡಿ ಬಂಕಾಪೂರ

## — ಅರ್ಪಣೆ. —

ಶ್ರೀ ರಂಭಾಪುರಿ ಶ್ರೀ ೧೦೦೮ ಶ್ರೀ ಜಗದ್ಗುರು
ಪ್ರಸನ್ನ ರೇಣುಕ

### ವೀರಗಂಗಾಧರ ಮಹಾರಾಜೇಂದ್ರ ಶಿವಾಚಾರ್ಯರು.







ಶ್ರೀ ಮದ್ವೇದ ವೇದಾಂತ ಸಿದ್ಧಾಂತ ಪುರಾಣಾಗಮೇತಿಹಾಸ ಸಕಲಶಾಸ್ತ್ರ ಪ್ರಸಿದ್ಧ ಶ್ರೀ ಮದ್ವೀರಶೈವ ಮಹಾಮತ ಸ್ಥಾಪನಾ ಚಾರ್ಯವರ್ಯ ಶ್ರೀ ಮದ್ರೇಣುಕಾಚಾರ್ಯ ಪರಂಪರಾಗತ ಶ್ರೀ ಮದ್ರಂಭಾ ಪುರೀ ವೀರಸಿಂಹಾಸನಾಧೀಶ್ವರ ಶ್ರೀ ಮಜ್ಜಗದ್ಗುರು ಶ್ರೀ ೧೦೦೮ ಶ್ರೀ ಪ್ರಸನ್ನ ರೇಣುಕ ವೀರಗಂಗಾಧರ ಮಹಾರಾಜೇಂದ್ರ ಮಹಾ ಸ್ವಾಮಿವರ್ಯರ ಚರಣತಲಕ್ಕೆ ಈ ಹೊತ್ತಗೆಯನ್ನು ಶ್ರೀ. ವೇ|| ವೀರಭದ್ರಯ್ಯ ಕಲ್ಯಾಣಮಠ ಬಂಕಾಪೂರ. ಇವರು ಕಾಣಿಕೆ ಯಾಗಿ ಅರ್ಪಿಸಿದ್ದಾರೆ.

ಲೇಖಕ:— ಬಸವರಾಜ ಅಂಗಡಿ, ಬಂಕಾಪೂರ.

# ಪೀಠಿಕೆ

—

ಈ ಲೋಕದಲ್ಲಿ ಹುಟ್ಟಿದವರೆಲ್ಲ ಸಾಯುವರು. ಸತ್ತವರೆಲ್ಲ ಪ್ರಾಯಃ ಹುಟ್ಟುವರು ಈ ಹುಟ್ಟು-ಸಾವುಗಳೆಂಬ ತಿರುಗುಣಿ ಮಡುವಿನ ಸೆಳವಿನಲ್ಲಿ ಸಿಕ್ಕು ತಿರು ತಿರುಗಿ ಎಲ್ಲರೂ ಪರಿತಾಪ ಪಡತಕ್ಕವರೇ. ಅವರಲ್ಲಿ ತಮ್ಮ ದುಃಖವನ್ನು ಲೆಕ್ಕಿಸದೆ, ಇಡಿ ಜಗತ್ತಿನ ಜನರ ಕಲ್ಯಾಣಕ್ಕಾಗಿ ತಮ್ಮ ತನ-ಮನ-ಧನಗಳನ್ನು ಸವಿಸಿ ಸಣ್ಣ ಮಾಡಿ, ಕಣ್ಮರಿಯಾಗುವ ಮಹಾತ್ಮರಿಗೆ ಜೀವ-ಜ್ಯೋತಿಗಳೆಂದೂ ವಿಷಯ ವೈರಾಗ್ಯವೆಂಬ ಬೆಂಕಿಯಿಂದ ಭೌತಿಕ ಶರೀರವನ್ನು ಸುಟ್ಟು, ಶಾಶ್ವತವಾದ ತಮ್ಮ ಕೀರ್ತಿ ಶರೀರವನ್ನು ಇಲ್ಲಿಟ್ಟು ಮರಳಿ ಹುಟ್ಟದ ಮಹಾನುಭಾವರಿಗೆ ಜೀವನ್ಮುಕ್ತರೆಂದು ಜನರು ಅನ್ನುವದುಂಟು ಇಂತಹ ಜೀವಜ್ಯೋತಿ ಜೀವನ್ಮುಕ್ತರುಗಳ ಮಾಲೆಯಲ್ಲಿ ಮಧ್ಯಮಣಿಯೆನಿಸಿದ ನಮ್ಮ ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಶಿವಾಚಾರ್ಯರು ಒಬ್ಬ ಯೋಗಿವರ್ಯರಿದ್ದಾರೆ. ಇವರ ಜೀವನ ಚರಿತ್ರವು ಲೋಕ ಪವಿತ್ರವಾದುದು ಓದುಗರ ಮೈ-ಮಾತು-ಮನ ಮಾಲಿನ್ಯವನ್ನು ತೊಳೆದು ಮೋಕ್ಷ ಮಾರ್ಗದ ಸೋಪಾನುಗಳನ್ನು ಏರಿಸುವದು ಆ ಕಾರಣ ಹಿಂದಿನ ಹಿರಿಯರಿಗೆ ಶಿರಬಾಗಿ ಈ ಯೋಗಿವರ್ಯರ ಚರಿತೆಯನ್ನು ಬರೆಯಲು ಸುರುವು ಮಾಡುವೆನು

# ಹಿನ್ನೆಲೆ

—●—

ಸ್ವತಂತ್ರ ಭಾರತ ಮಾತೆಯ ಕೈಗನ್ನಡಿಯಂತಿರುವ ಕನ್ನಡ ನಾಡಿನಲ್ಲಿ ಧಾರವಾಡ ಜಿಲ್ಲೆಯಲ್ಲಿ ಹುಬ್ಬಳ್ಳಿ ತಾಲೂಕಿಗೆ ಸೇರಿದ ಪಾಲಿಕೊಪ್ಪ ಎಂಬದೊಂದು ಹಣ್ಣಹಳ್ಳಿ, ಆ ಹಳ್ಳಿಗೆ ನಾಲ್ಕೂ ಸಿಟ್ಟನಿಂದ ಕೆಮ್ಮಣ್ಣಿನ ಅಗಲವಾದ ಲೈನ ಮಾರ್ಗವು ಸುತ್ತುಗಟ್ಟಿದೆ. ಅದರಿಂದ ಆ ಹಳ್ಳಿ ಎಂಬ ಹೆಂಗಳೆಯು ನಡುವಿಗೆ ಬಂಗಾರದ ಪಟ್ಟಿಯನ್ನಿಟ್ಟರುವಂತೆ ತೋರುಂದು. ಆ

ಲೈನದ ಎರಡೂ ದಂಡೆಗುಂಟ ಇರುವ ಗಿಡ ಮರಗಳಲ್ಲಿ ಕುಳಿತು ಮಂಜುಳ ವಾಗಿ ಕೂಗುವ ಹಕ್ಕಿ ಪಕ್ಕಿಗಳ ಕಿಲಿ ಕಿಲಿ ಧ್ವನಿಯು ಆ ಪಟ್ಟೆಯ ಕಿರು ಗೆಜ್ಜೆಗಳ ಮರು ಧ್ವನಿಯಂತೆ ಕೇಳ ಬರುತಿವೆ ಆ ಊರ ಸುತ್ತು ಮುತ್ತ ಲಿನ ವಿಸ್ತಾರವಾದ ರಾಜ ಬೀದಿಗಳು ನೆಲಕ್ಕೆ ಹಬ್ಬಿದ ಬಂಗಾರದ ಬಳ್ಳಿ ಗಳಂತೆ ಒಂದಕ್ಕೊಂದು ತಳಕು ಬಿದ್ದಿವೆ ಆ ರಾಜ ಮಾರ್ಗಗಳ ಎಡ ಬ ಗಳಲ್ಲಿ ಬೇವು, ಮಾವು. ಬಿಲ್ವ, ಬೆಳವಲ, ಬಸರಿ, ಅತ್ತಿ, ಆಲ, ನೀರಲ ಸಿರಸಲ ಮೊದಲಾದ ಗಿಡ ಮರಗಳು ಮದವೇರಿ ಬೆಳೆದು ಮುಗಿಲಿ ಮುದ್ದಿಡುವಂತೆ ಸಾಲು ಸಾಲಾಗಿ ಎಡೆ ಬಿಡದೆ ಎದ್ದು ನಿಂತಿವೆ. ಅವುಗ ನೆಳಲು ದಾರಿಗುಂಟ ದಟ್ಟಾಗಿ ಬಿದ್ದಿರುವದರಿಂದ ಎಂತಹ ಕೆಟ್ಟ ಬೇಸಗೆಯ ಕಡು ಬಿಸಿಲಲ್ಲಿಯಾದರೂ ನಡೆಯುವ ದಾರಿಕಾರರಿಗೆ, ಎಷ್ಟೂ ಕಷ್ಟವಾಗು ದಿಲ್ಲ. ದಾರಿ ದಾರಿಗೂ ಕೆರೆ, ಭಾವಿ, ಹಳ್ಳ, ಕೊಳ್ಳ ಅಲ್ಲಲ್ಲಿಗೆ ಕಂಗೊ ಸುತ್ತಿರುವವು ಎತ್ತ ನೋಡಿದರೂ ಹಚ್ಚಗೆ ಹಸರು ಮುರಿಯುವ ಎಳೆ ಹುಲ್ಲಿನ ಭೂಮಿಗಳೇ ಕಾಣ ಬರುವವು. ಅಲ್ಲಿಯ ಎತ್ತು, ಎಮ್ಮೆ, ಆಕಳ ಗಳು, ಆಡು, ಕುರಿ ಮರಿಗಳು ಆನಂದದಿಂದ ಮೇದು ಮೆಲಕಾಡಿಸುತ್ತ ಸಾ ಗಿಡ ಬಳ್ಳಿಗಳ ನೆಳಲ್ಲಿ ಉಲ್ಲಾಸದಿಂದ ಮಲಗಿಕೊಂಡಿವೆ. ಗಿಳಿ, ಕೋಗಿಲೆ ಗೊರವಂಕ ಮೊದಲಾದ ಹಕ್ಕಿ ಪಕ್ಕಿಗಳಂತೂ ಹಣ್ಣು ಹಂಪಲಗಳನ್ನು ತಿಂದು ಆ ಗಿಡದಿಂದ ಈ ಗಿಡಕ್ಕೆ ಈ ಗಿಡದಿಂದ ಆ ಗಿಡಕ್ಕೆ ಕಿಲಿ ಕಿಲಿಸುತ ಚಕ್ಕಂದದಿಂದ ಹಾರಾಡುತ್ತವೆ. ಒಟ್ಟಿನ ಮೇಲೆ ಆ ಪ್ರದೇಶವು ಸದಾ ಸುಖದ ಸುಗ್ಗಿಯಾಗಿದೆ ಎಂದರೂ ಸಲ್ಲುವದು.

ಈ ಊರ ಪೂರ್ವಕ್ಕೆ ಕರಿಯ ನೆಲದೊಳಗಿಂದ ಹಾದು ಒಂದು ಕೆಂ ಲೈನ ಮಾರ್ಗವು ನೆಟ್ಟಗೆ ಪುಣೆಯಿಂದ ಹರಿಹರಕ್ಕೆ ಹೋಗಿದೆ. ಅದ ಭೂದೇವಿಯು ತಿದ್ದಿ ತೆಗೆದ ಕುಂಕುಮ ಹಚ್ಚಿದ ಅಗಲವಾದ ಬೈತಲೆಯಂ ನೋಟಕ್ಕೆ ನೀಟಾಗಿ ಕಾಣುವದು ಅದರಗುಂಟ ಹೋದರೆ ಮುಂ ಶಿಗ್ಗಾಂವಿ, ಬಂಕಾಪೂರ, ಹಾವೇರಿ, ರಾಣೆಬೆನ್ನೂರ, ಹರಿಹರಗಳೆಂಬ ಪ ಗಳು ಹತ್ತುವವು. ಇಲ್ಲೆಲ್ಲ ಒಕ್ಕಲಿಗರ ಬಳಗವು ಕಿಕ್ಕಿರಿದಿದೆ. ಸೆಟ್ಟಿ ಸಾ ಕಾರರ ದಟ್ಟಣೆ ಇದೆ, ವೀರಶೈವಾದಿ ಎಲ್ಲ ವರ್ಗದವರ ಭವನಗಳೂ ಉಂಟು ಈ ಪೇಟೆ ಪಟ್ಟಣಗಳು ಸುತ್ತಲಿನ ಹಳ್ಳಿಗರಿಗೆ ಎಲ್ಲ ಬಗೆಯಿಂದಲೂ ಜೀವ ಜೀವಾಳವಾಗಿದೆ. ಈ ಸುತ್ತಲಿನ ಹಳ್ಳಿಗಳಲ್ಲಿ ಒಳ್ಳೊಳ್ಳೆ ಎತ್ತು, ಎಮ್ಮೆ

ಆಕಳುಗಳಿರುವದರಿಂದ ಹಾಲು ಹೈನಗಳಿಗೇನೂ ಕೊರತೆಯಿಲ್ಲ. ಮೊಸರು ಬೆಣ್ಣೆಗಳ ಆಗರವೆಂದರೂ ಸಲ್ಲುವದು, ಇಂತಹ ನಾಡಿನಲ್ಲಿ ಪಾಲಿಕೊಪ್ಪವೆಂಬ ಹಳ್ಳಿ ಇರುವದು- ಪಾಲಿನಕೊಪ್ಪಲು ಅಂದರೆ ಹಾಲಿನ ಹಳ್ಳಿ ಎಂದು ಆದರ್ಶವಾಗುವದು ನೋಡಿ, ಆಹಾರದಲ್ಲಿ ಎಲ್ಲ ಜೀವನ ಸತ್ವಗಳುಳ್ಳ ಪೂರ್ಣಾಹಾರವಾದ ಹಾಲಿಗೆ ನಾವು ಅಮೃತವೆಂದು ಅನ್ನುವದಿಲ್ಲವೇ? ಅಂತಹ ಅಮೃತಪುರವೆಂಬ ಪಾಲಿಕೊಪ್ಪದಲ್ಲಿ ಇಂತಹ ಜಗದ್ಗುರುಗಳು ಜನ್ಮ ತಳೆದದ್ದರಿಂದ ಅದೊಂದು ಪುಣ್ಯಕ್ಷೇತ್ರವೇ ಸರಿ

ಈ ಹಳ್ಳಿಯಲ್ಲಿ ಹಿರೇಮಠವೆಂದು ಸ್ವಾಮಿಗಳ ಮಠವದೆ ಅದು ಬಹಳ ಸೊಬಗಿನದದೆ ಅಲ್ಲಿ ಸುತ್ತು ಮುತ್ತು ಎತ್ತರವಾಗಿ ಬೆಳೆದ ಬಿಲ್ವ ಬನ್ನಿಪತ್ರಿಯ ಗಿಡಗಳು, ಅಶೋಕ-ಆಕಾಶ ಮಲ್ಲಿಗೆಯ ಮರಗಳು ಬಹಳವಾಗಿ ಒಪ್ಪುವವು ಹಸನಾಗಿ ಬೆಳೆದ ಹಲಸಿನ ಗಿಡಗಳು ಮಾವಿನ ಬನಗಳೂ ಸೊಗಸಾದ ತನಿವಣ್ಣುಗಳನ್ನು ನೀಡಿ, ಬಂದ ಅತಿಥಿಗಳನ್ನು ತಣಿಸವವು ಆದುದರಿಂದ ಆ ಪುಣ್ಯಾಶ್ರಮವು ದಾರಿಗರಿಗೆ ಆರಮನೆ ! ತಾಪಸರಿಗೆ ತವರು ಮನೆ ! ಭಾವಿಕರಿಗೆ ಗುರುಮನೆ ! ದೀನರಿಗೆ ಸಿರಿಮನೆ ! ಸ್ಮರನಿಗೆ ಸೆರೆಮನೆಯಾಗಿ ಮೆರೆಯುತಿದೆ. ಇಂತಹ ತಾಣದಲ್ಲಿ ಉದಿಸಿದ ಗುರು ನದಿಯು ಹರಿಯುತ್ತ ನಾಡನ್ನೆಲ್ಲ ಸುತ್ತಿ ಈಗ (ಬಾಳಿಹಳ್ಳಿಯ) ರಂಭಾಪುರಿಯ ಜಗದ್ಗುರುವೆಂಬ ಸಾಗರಕ್ಕೆ ಕೂಡಿದೆ.

———

# ರಂಭಾಪುರಿ ನಾಡು !



ಇಡೀ ವಿಶ್ವದಲ್ಲಿ ಭರತ ಖಂಡದಲ್ಲಿ ಪಂಚ ಪೀಠಗಳೆಂಬ ಹೆಸರು ಪಡೆದ ಆಚಾರ್ಯರ ಪೀಠಗಳಾದ ಕಾಶಿ, ಕೇದಾರ, ಉಜ್ಜಯನಿ, ಶ್ರೀಶೈಲ, ರಂಭಾಪುರಿ ಈ ಪೀಠಾಧೀಶ್ವರರ ಹಿನ್ನೆಲೆಯು ಮಾನವನ ಬಾಯಿಂದ ಹೊಗಳ ಲಿಕ್ಕೆ ಸಾಲದು. ಯಾಕಂದರೆ ಈ ಪೀಠದ ಜಗದ್ಗುರುಗಳು ರೇಣುಕಾವ ತಾರಿಗಳು. ಮನುಷ್ಯರಲ್ಲ ! ಲಿಂಗೋದ್ಭವರು: ಈ ಮಾತು ಸ್ಪಷ್ಟ ವಾದ ಶಿಲಾ ಶಾಸನಗಳಿಂದ ಕೆತ್ತಲ್ಪಟ್ಟ ಪುರಾತನ ಲಿಪಿಗಳಿಂದ ಸಿದ್ಧವಾಗಿದೆ, ಪರಮಾತ್ಮನು ತನ್ನ ಅವತಾರವನ್ನು ಲಿಂಗ ಭೇದಿಸಿ ಎದ್ದು ಮಿರಿ ಮಿರಿ ಮಿಂಚುತ ಭುವಿಯಲಿ ಬಂದು ಧರ್ಮೋದ್ಧಾರವ ಒಳಗೆ ತುಂಬಿಟ್ಟುಕೊಂಡು ಧರ್ಮ ಹೀನರಿಗೆ ಜಾಗೃತಿಯ ಮಾಡಿ ಅಧರ್ಮಿಗಳನು ಶಪಿಸುತ ಗರ್ವ ಭಂಗವನು ಮಾಡಿ. ಭಕ್ತಿ ಭಾವನೆಯಿರಿಸಿ, ಗರ್ಜನೆಯನು ಮಾಡುತ್ತ ಜ್ಯೋತಿ ಲಿಂಗವಯಿರಿಸಿ ರಂಜಿಸಿ ಪೂಜೆಗೈಯಲು ನಿರ್ಮಿಸಿದಂಡಕಮಂಡಲು ವೇದ ಘೋಷಣೆಗಳು ಜಡಿಯಲಿ ಲಿಂಗವ ಧರಿಸುತಲಿ ಭಕುತರ ಪ್ರೇಮವ ಮನದಲಿ ಸ್ಮರಿಸುತ ಪರಮ ವೈರಾಗ್ಯ ವಿಶಾರದ ನೆನಿಸಿದ ಜಗದ ಸೌಭಾಗ್ಯ ಸಿಧಿ ರೇಣುಕಾರ್ಯರು ಈ ಪಂಚ ಪೀಠಗಳಲ್ಲಿ ಅವತರಿಸಿ ಭೂಮಿಯ ಮೇಲೆ ಚರಿಸಿ ಭರತಖಂಡವನ್ನು ಪುನೀತವಾಗಿ ಮಾಡಿದ್ದಾರೆ ಇದರ ಬಗ್ಗೆ ಹೇರಳವಾದ ಕುರುಹುಗಳೂ ಪ್ರತ್ಯಕ್ಷ ಪವಾಡಗಳೂ ಈಗಲೂ ನಮಗೆ ನೋಡಲಿಕ್ಕೆ ದೊರೆಯುತ್ತವೆ.

ಈ ವೀರ ಶಿವರ ಧರ್ಮವು ಧರ್ಮಾಧಿಕಾರಿಗಳು ಭರತಖಂಡದಲ್ಲಷ್ಟೇ ಮೆರೆಯುವದಿಲ್ಲ. ಇಡೀ ಜಗತ್ತಿನಲ್ಲಿಯೂ ತನ್ನ ವಿಶ್ವ ವ್ಯಾಪಕತ್ವವನ್ನು

ಕರಡಿದ್ದಾರೆ. ಅಂತೆಯೇ ಎಲ್ಲೆಡೆಗೂ ಸಾಕ್ಷಿಭೂತವಾಗಿ ಇಂದಿಗೂ ನಿಂತಿವೆ ದೇವಾಲಯಗಳು; (ಇದರ ವಿಶೇಷ ಮಾಹಿತಿಯನ್ನು ವೇ ಪಂ ಕಾಶೀನಾಥ ಶಾಸ್ತ್ರಿಗಳು ಬರೆದ "ವೀರಶೈವ ರತ್ನ" ವೆಂಬ ಹೊತ್ತಗೆಯನ್ನು ಓದಿದವರೆ ಪ್ರಾಯಶಃ ಬಲ್ಲರು. ಬೇಕಾದವರು ಓದಿ ತಿಳಕೊಳ್ಳಬಹುದು.) ಇಂಥ ಪಂಚ ಪೀಠಗಳಲ್ಲಿ ಮೊದಲ ಪೀಠದ ಹಿರಿದಾದ ಸ್ಥಾನವೂ ಆದ ಶ್ರೀ ಮದ್ರಂಭಾಪುರಿ ರೇಣುಕರು ಕೊಲ್ಲೀಪಾಕಿಯೊಳು ಜನಿಸಿ, ಬಾಳೆಹಳ್ಳಿಯೇ ವಾಸಿಯಾಗಿ (ರಂಭಾಪುರಿಯಲ್ಲಿ) ಲಿಂಗಾಂಗಿಯ ಜನ್ಮ ತಾರಿಸಿ ಜಗದೊಳು ಸ್ವಾಮಿಯಾಗಿ ಮೆರೆಣಿಸಿದಾತನ ಹಿರಿದಾದ ಪೀಠವು; ಭೂಲೋಕದ ಸ್ವರ್ಗ; ರಮಣೀಯ ಪ್ರದೇಶ; ಸೌಂದರ್ಯ ಸಾಗರ, ಭೂಮಾತೆಯ ಚೆಲುವು ಎಲ್ಲವೂ ಉಂಟು. ಈ ಪುಣ್ಯ ಕ್ಷೇತ್ರವಲ್ಲಿ, ಇಂಥ ಮುಕ್ತಿ ಮಾರ್ಗದ ಭೂಕೈಲಾಸದ ಸೊಬಗನ್ನು ಸವಿಯುವಾ !

ರಂಭಾಪುರಿಯು ನಿಜವಾಗಿಯೂ ಸಗ್ಗಲೋಕದ ರಂಭೆಯ ಪುರಿ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ; ಇಲ್ಲಿ ನಿಸರ್ಗದೇವಿಯು ತನ್ನ ಪ್ರಕೃತಿ ಸೌಂದರ್ಯವನ್ನು ಚೆಲ್ಲುವರಿದು ಬಿಟ್ಟಿದ್ದಾಳೆ ಸುತ್ತು ಮುತ್ತು ಗಿರಿಗಳ ಸಾಲು! ಹತ್ತಿರದಲ್ಲಿಯೇ ಹಾವಿನಂತೆ ಹರಿವ ಭದ್ರಾ ನದಿಯು; ಮತ್ತು ಒಳೆ ದಟ್ಟವಾಗಿ ಎತ್ತರವಾಗಿ ಬೆಳೆದ ತರುರಾಜಿಗಳ ಗುಂಪು; ಆಕಾಶಕ್ಕೆ ಎಳೆ ಗಾಯಿ ತಿಳಿ ರಸವನ್ನು ಕೊಡುವವೋ ಏನೋ ಎಂಬಂತೆ, ತೆಂಗು, ಅಡಿಕೆ, ಒನಗಳು ಯಾಲಕ್ಕಿ, ಕಾಫಿ ತೋಟಗಳು; ಕಬ್ಬುಗಳ ಕೊಬ್ಬೇರಿದ ಬೆಳೆಗಳು ಕಂಗೊಳಿಸುತ್ತವೆ. ತಮ್ಮನ್ನು ಸಾಕಿ ಸಲುಹಿ ದೊಡ್ಡವರನ್ನಾಗಿ ಮಾಡಿದ ಭೂದೇವಿಗೆ ತನಿವಣ್ಣುಗಳನ್ನು ಕೊಡಲೆಂದು ಬಾಳೆಯ ಬನಗಳು ಹಣ್ಣಿನ ಗೊನೆಗಳ ಭಾರದಿಂದ ಬಾಗಿ ನಿಂತಿವೆ. ಎಲ್ಲೆಡೆಗೂ ಚೆಲ್ಲುವರಿದು ಪಲ್ಲವಿಸಿ, ಒಂದಕ್ಕೊಂದು ತಳುಕು ಬಿದ್ದು ಬಳಕುವ ಯಾಲಕ್ಕಿ ಬಳ್ಳಿಗಳ ಸಾಲುಗಳು ಅಲ್ಲಲ್ಲಿಗೆ ಶೋಭಿಸುತ್ತವೆ; ಗಂಧ, ಚಂದನ, ತೇಗು, ಮತ್ತಿ, ಮುಂತಾದ ಮುಗಿಲೆತ್ತರ ಮರಗಳ ಬನಗಳಿಂದ ಈ ನಾಡು ಬನದೊಳಗಿರುವ ಬನಶಂಕರಿ ಕುಲದೇವತೆ ಶಾಖಾಂಬರಿ ಎಂಬ ಕವನವನ್ನು ನೆನಪು ಮಾಡಿ ಕೊಡುತ್ತದೆ. ಇಲ್ಲಿ ನೆಲ್ಲಿ-ನಿಂಬೆ-ನೇರಲ-ಪೇರಲ- ಕಾರಿ-ಬೋರೆ- ಕಂಚಿ-

ಹಲಸು ಮುಂತಾದ ಅನಂತ ಫಲಭರಿತ ವೃಕ್ಷಗಳು ತಮಗೆ ನೀರೆರೆದು ಪೊರೆದ ಮೇಘರಾಜನಿಗೆ ಮೀಸಲವಾದ ಸವಿ ಸವಿ ಹಣ್ಣುಗಳನ್ನು ಕೊಡಲು ಕೊಂಬೆಗಳೆಂಬ ಕೈಗಳನ್ನು ಅಂಬರಕ್ಕೆ ಎತ್ತಿಕೊಂಡು ನಿಂತಿವೆಯೋ ಏನೋ ಎಷ್ಟೊಂದು ಬಣ್ಣಿಸಲಿ, ಇಲ್ಲಿಯ ಸೊಬಗನ್ನು; ಬೇವು ಮಾವು, ಬಸರಿ-ಆಲ ಅತ್ತಿ-ಅರಳಿ-ಮರಗಳ ತಂಪು; ಬಿಲ್ವ-ಬಕುಲ- ಸಿರಸಲ-ಸಂಪಿಗೆ ಹೂಗಳ ಕಂಪು; ಜಾಜಿ-ಮಲ್ಲಿಗೆ ಮನೋರಂಜನ ಮಾಲತೀ ಮಂಟಪಗಳ ಸೊಂಪು ನಿರುಕಿಸರ ಮನವನ್ನು ಬಲವಾಗಿ ಸೆಳೆದುಕೊಳ್ಳುತ್ತವೆ. ಸುಗಂಧಕ್ಕೆರಗಿ ಝೇಂಕರಿಸುವ ಭ್ರಮರಗಳ ಗುಂಜಾರವವು; ಚಿಗಿತ ಮಾವಿನ ಮರದ ಮುಗುಳು ತಿಂದು, ಮನಬಂದಂತೆ ಕೂಗುವ ಕೋಕಿಲೆಗಳ ಕುಕಿಲಗಳು; ಪೇರಲ-ನೀರಲ ಹಣ್ಣುಗಳ ತಿಳಿ ರಸವನ್ನು ಕುಡಿದು ಚಿಲಿಪಿಲಿಸುವ ಗಿಳಿಗಳ ಸವಿಮಾತುಗಳು ಸತತವಾಗಿ ಕಿವಿಯಲ್ಲಿ ಬೀಳುತಲಿವೆ; ಹಲವು ತರದ ಕಸು ಗಾಗಿ ಮೊದಲಾದ ತಿನಸುಗಳನ್ನು ಮನಸಿಗೆ ಬಂದಂತೆ ತಿಂದು ಮದವೇರಿ ಘೂಕ್ ಎಂದುಮರದಿಂದ ಮರಕ್ಕೆ ಹಾರಾಡುವ ಮಂಗಗಳ ಮಾರ್ದನಿಗಳು; ನಲುವಿಂದ ನರ್ತಿಸುವ ನವಿಲುಗಳ ಕೇಕಾರವು, ಕುಕ್ಕಿ ಕುಕ್ಕಿ ತಿಂದು ಸೊಕ್ಕೇರಿ ಒದರುವ ನಾನಾತರದ ಹಕ್ಕಿಗಳ ಇಂಚರವೂ ಒಟ್ಟುಗೂಡಿ ಎಲ್ಲ ನಿಟ್ಟಿನಿಂದ ಮಾಧುರ್ಯವವು ತುಂಬಿ ಸೂಸುತ್ತಿವೆ. ಬಹಳ ಹೇಳಲೇನು ಈ ನಾಡಿನ ಸೊಬಗನ್ನು; ಯಾವತ್ತೂ ಸೃಷ್ಟಿ ಸೌಂದರ್ಯದ ಸಾರವೇ ಇಲ್ಲಿ ಒಟ್ಟಾಗಿ ನಿಂತಿದೆ: ಬೇರೆ ಕಡೆಯಲ್ಲಿ ಕ್ಷೀರ ಕುಡಿದು ರೋಗಿಯಾಗಿರುವ ದಕ್ಕಿಂತ ಇಲ್ಲಿಯ ನೀರು ಕುಡಿದು ನಿರೋಗಿಯಾಗಿರುವದು ಒಳಿತಲ್ಲವೆ ?

ಇಂತಹ ಇಂಪು-ಕಂಪು-ತಂಪುಗಳಿಂದ ಮನ ಮೋಹಕವಾದ ವನ ಗಳ ನಟ್ಟ ನಡುವೆ ರಂಭಾಪುರಿಯು ಇರುವದರಿಂದ ಇದರ ಸಡಗರವನ್ನು ಬಣ್ಣಿಸುವದೇನು ? ಉಜ್ಜಯನೀ ಪಟ್ಟಣದಲ್ಲಿ ಮಹಾಕಾಲೇಶ್ವರನಿದ್ದಂತೆ ಇಲ್ಲಿ ರೇಣುಕದೇವನು ನೆಲಸಿರುತ್ತಾನೆ ಈ ಮಂದಿರದಿಂದ ಸೌಂದರ್ಯವು ಮತ್ತಷ್ಟು ಹೆಚ್ಚಾಗಿದೆ. ಇಲ್ಲಿ ಸುತ್ತು ಮುತ್ತಲಿನ ಎತ್ತರವಾದ ಪೌಳಿ ಯೊಳಗೆ ಬಹಳ ದಿನಗಳಿಂದ ಬೆಳೆದು ದೊಡ್ಡದಾಗಿ ನಿಂತ ಬಿಲ್ವ ಗಿಡದಲ್ಲಿ ತುತ್ತ ತುದಿಗೆ ಕಾವಿಯ ಬಟ್ಟೆಯ ಪಂಚಾಚಾರ್ಯರ ಬಾವುಟವು ಆದು

ದೂರದಿಂದ ಬರುವ ದಾರಿಗರನ್ನು-ಭಕುತರನ್ನು ಕೈಸನ್ನೆ ಮಾಡಿ ಕರೆಯು ವದೋ? ಎನೋ? ಎಂಬಂತೆ ಗಾಳಿಗೆ ಪಟ ಪಟನೆ ಹಾರಾಡುತ್ತಿದೆ; ಈ ಪೌಳಿಯ ಉತ್ತರ ದಿಕ್ಕಿಗೊಂದು ಎತ್ತರವಾದ ಮಹಾದ್ವಾರವಿದೆ ಅದಕ್ಕೆ ಹೊಂದಿ ಕಟ್ಟೆಗಳುಂಟು, ಅವುಗಳ ಮೇಲೆ ಭಕ್ತರು ಕುಳಿತುಕೊಂಡು ಯಾವಾಗಲೂ ಭಜನೆಯಿಂದ ಕಾಲ ಕಳೆಯುತ್ತಿರುವರು

ಈ ಮಠವು ಎರಡು ಭಾಗ ಮಾಡಲ್ಪಟ್ಟಿದೆ. ಒಂದನೆಯ ಭಾಗದಲ್ಲಿ ವೀರೇಶದೇವರಗುಡಿ ಮತ್ತು ಸೇದುವ ಭಾವಿ ರುದ್ರ ಮುನಿವರ್ಯರ ಗದ್ದುಗೆ ಗಳು ಆದಿಯಾಗಿ ಶ್ರೀ ಶಿವಾನಂದ ಜಗದ್ಗುರುಗಳ ಗದ್ದುಗೆಯೂ ಮತ್ತು ಹುತ್ತ ಬೆಳೆಯುವ ಗದ್ದುಗೆಯೂ ಉಂಟು; ಮುಂದೆ ಹೋದರೆ ಎರಡನೆಯ ಭಾಗದ ಮಠದ ಪೂರ್ವಕ್ಕಿರುವ ಹೆಬ್ಬಾಗಿಲು ಹತ್ತುವದು. ಹಾಗೆಯೇ ಒಳಕ್ಕೆ ಹೋದರೆ ರೇಣುಕಾರ್ಯರ ಮೂರ್ತಿಗಳು ಮುಂದೆ ಕಾಣುತ್ತವೆ. ದರ್ಶನವನ್ನು ಪಡಕೊಂಡವರೇ ಧನ್ಯರು

ಈ ದೇವರ ಪ್ರಭಾವದಿಂದಲೇ ಈ ನಾಡು ಎಲ್ಲ ಕಲೆಗಳಿಗೆ ನೆಲೆಯಾ ಗಿದೆ. ಕವಿಗಳಿಗಿದು ಕೇಳೀವನ; ಸಾಧುಗಳಿಗಿದು ಸಂಗಮ; ಪಂಡಿತರಿಗಿದು ಭಾಂಡಾರ; ಗಾಯಕರಿಗಿದು ಆಗರ; ಗಮಕಿಗಳಿಗಿದು ತವರುಮನೆ, ಸಹೃದಯ ರಿಗಿದು ಸದನ; ಹಾಡು ಬಾರಿಸುವವರಿಗಿದು ಬೀಡು, ರಸಿಕರಿಗಿದು ರಂಗ ಮಂಟಪದ ಸೂಡು; ಆಗಿ ಮೆರೆಯುತ್ತಿದೆ. ಒಟ್ಟಾರೆ ಎಲ್ಲದರಿಂದಲೂ ಬಲ್ಲಿ ದ್ದೆಂದು ಸಾವಿರಾರು ಗಾವುದಗಳ ತನಕ ಹೆಸರಾಗಿದೆ. ಅಂತೆಯೇ ಈ ನಮ್ಮ ದೇವರ ಬಳಿಯಲ್ಲಿಯೇ ಶ್ರಂಗೇರಿಯ ಶ್ರೀ ಶಂಕರಾಚಾರ್ಯರು ಅಭ್ಯಾಸ ಹೇಳಿಸಿಕೊಂಡು ಹೋದದ್ದಲ್ಲದೆ ಚಂದ್ರಮೌಳೀಶ್ವರ ಲಿಂಗವನ್ನು ಪಡಕೊಂಡು ಶಿಷ್ಯರಾದರು ಅಂದಿನಿಂದ ಇಂದಿನ ವರೆಗೂ ಪರಮ ವೈರಾಗ್ಯಶೀಲರಾದ ಮಹಾ ಶಿವಯೋಗಿಗಳ ವಾಸವಾಗಿ ವೀರಶೈವ ಜಗದ್ಗುರುಗಳ ಸ್ಥಾನವಾಗಿ ರುತ್ತದೆ, ಪಂಚಾಚಾರ್ಯರ ಸಿಂಹಾಸನಗಳಲ್ಲಿ ಒಂದು ಮುಕುಟ ಮಣಿ ಯಾಗಿ ತಪಸ್ವಿಗಳ ರತ್ನದ ತೇಜಸ್ಸು ಎಲ್ಲೆಡೆಗೂ ಪ್ರಕಾಶಮಾನವಾಗಿದೆ.

ವಂದೇ ರೇಣುಕಂ !

# ತ್ರಾಯ್ನಾಡು

## ವಿದ್ಯಾಭ್ಯಾಸ — ಮನೋಭೂಮಿಕೆ

ಇಂದೊಮ್ಮೆ ಭರತಖಂಡದಲ್ಲಿ ದಂಡಕಾರಣ್ಯವೆಂದು ಹೆಸರಾದ ತಪೋಭೂಮಿಯು ಇಂದು ಪಳ್ಳಿ-ಪಟ್ಟಣಗಳಿಂದ ನೆಲಸಿ ಎಲ್ಲ ಭೂಮಿಯು ದಟ್ಟವಾದ ಜನವಸತಿಯಿಂದ ತುಂಬಿ ತಪೋವನ ಆಶ್ರಮಗಳು ಜನದಟ್ಟಣೆಯಲ್ಲಿ ಕೂಡಿಕೊಂಡು ಮಾಯವಾಗಿ ಪ್ರತ್ಯೇಕ ಕಾಣದಂತಾಗಿವೆ. ಇಂಥ ತಪೋನಾಡಾದ ಕನ್ನಡದ ಪುಣ್ಯಭೂಮಿ ಪಾಲೀಕೊಪ್ಪವೆಂಬ ಗ್ರಾಮದಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಗಂಗಾಧರ ಸ್ವಾಮಿಗಳು ತಾಯಿ ಸಿದ್ದಮ್ಮ, ತಂದೆ ಅಡವಿ ಸ್ವಾಮಿಗಳು ಹಿರೇಮಠದ ಸದಾಚಾರಿಗಳೂ, ಸದ್ಧರ್ಮನಿರತರೂ ಆದ ಜನನೀ-ಜನಕರಿಂದ ಉದ್ಭವಿಸಿ ಮಾನವ ದೇಹದ ಅವತಾರವ ತೊಟ್ಟು ನಮ್ಮ ಕಂಗಳಿಗೆ ಗೋಚರಿಸ ತೊಡಗಿದ್ದಾರೆ. ಶ್ರೀಯವರು ತಮ್ಮ ಜನ್ಮಭೂಮಿಯಾದ ಪಾಲೀಕೊಪ್ಪದಲ್ಲಿಯೇ ಪ್ರಾಥಮಿಕ ಬಿಜ್ಜಯವ ಕಲಿತು ಬಾಲ್ಯಾವಸ್ಥೆ ಪರಿಪೂರ್ಣವಾಗುತ್ತಲೇ ಹುಬ್ಬಳ್ಳಿಗೆ ಕಲಿಯಲಿಕ್ಕೆ ಹೋಗಿ ಅಲ್ಲಿ ಶಿಕ್ಷಣವು ಸರಿಯಾಗದೆ ಪಂ. ಹರೀಶ್ವರಶಾಸ್ತ್ರಿಗಳ ಬಳಿಯಲ್ಲಿ ಹಿರೇಬೆಂಡಿಗೇರಿಯಲ್ಲಿ ತಕ್ಕ ಮಟ್ಟಿಗೆ ಓದಿ ಮುಂದೆ ಉಚ್ಚ ಶಿಕ್ಷಣಕ್ಕಾಗಿ ವೇದಾಧ್ಯಯನಕ್ಕಾಗಿ ಸೊನ್ನಲಿಗೆಯ ಪುರವಂ ಸೇರ್ದು (ಸೊಲ್ಲಾಪುರದಲ್ಲಿ) ಅಲ್ಲಿಯ ಗುರುಕುಲದ ಅಧ್ಯಾಪಕರಾದ ವೇ. ಪಂ ಸಾಹಿತ್ಯ ರತ್ನ ಕುಲಪತಿ ಶ್ರೀ ಜಗದೀಶ ಶಾಸ್ತ್ರಿಗಳು ನಾಲ್ವರ. (ಆಗಿನ ವಾರದವರ ಪಾಠಶಾಲಾಧ್ಯಾಪಕರು) ಇಂದಿನ ಸೊಲ್ಲಾಪುರದ ಗುರುಕುಲ ಹೋಟಗಿಯವರ ಪ್ರಾಧ್ಯಾಪಕರೂ ಅವರ ವಿದ್ಯಾರ್ಥಿಯಾಗಿ ಆಧ್ಯಾತ್ಮ ಶಿಕ್ಷಣವನ್ನು ಪಡೆಯುವರಾದರು.

ಇವರು ಮಹತ್ಪುರುಷರಿದ್ದದ್ದರಿಂದ ಇವರಿಗೆ ಇವರ ಮನೋಭೂಮಿಕೆಗೆ ತಕ್ಕಂತೆ ಚೆನ್ನವೀರೇಶ್ವರ ಬ್ರಹನ್ಮಠ ಹೋಟಗಿ ಎಂಬ ಸಹಪಾಠಿಗಳು ದೊರೆತು ಈರ್ವರೂ ಒಂದುತನ ಒಕ್ಕಟ್ಟುಗಳಿಂದ ಧರ್ಮೋದ್ಧಾರದ ಕಾರ್ಯದಲ್ಲಿ ನಿರುತರಾಗಿ ಧಾರ್ಮಿಕತೆಗೆ ಬಂದೊದ್ದಿದ ಅನಾಚಾರವೆಂಬ ಬಿಕ್ಕಟ್ಟನ್ನು

ವೇದಾಧ್ಯಯನ ವಿದ್ಯಾರ್ಥಿಗಳಾದ



ಶ್ರೀ ಜಗದ್ಗುರು

ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯರು

ಧರ್ಮಭೂಷಣ

## ವೇ. ಪಂ. ಹರೀಶ್ವರ ಶಾಸ್ತ್ರಿಗಳು.



ಮಹಾಸನ್ನಿಧಿಯ ಮೊದಲ ಗುರುಗಳು ರಂಭಾಪುರೀ
ಮಹಾಸಂಸ್ಥಾನದ ಈಗಿನ ಏಜಂಟರು

ಶ್ರೀ. ವೇ. ಪಂಡಿತ ಸಾಹಿತ್ಯರತ್ನ

— ಜಗದೀಶ ಶಾಸ್ತ್ರಿಗಳು, ನಾಲ್ವಾರ. —



ಶ್ರೀಗಳವರ ಹಿರಿಗುರುಗಳು ಹೊಟಗೀಶ್ವರ

( ಸೊಲ್ಲಾಪೂರ. ) ಗುರುಕುಲ ಮಹಾಧ್ಯಾಪಕರು

ದಿಕ್ಕೆಟ್ಟು ಓಡಿಸಲು ಟೊಂಕ ಕಟ್ಟಿ ನಿಲ್ಲಲು ನಿರ್ಧಾರ ಮಾಡಿದ ತರುಣ ರೀರ್ವರು, ಗುರು ಕುಲದಲ್ಲಿ ತಮ್ಮ ಓದು ಮುಂದುವರಿಸುವದಲ್ಲದೆ ಆಚಾರ ವಿಚಾರ ಜಪ-ತಪಗಳಿಗೆ ತಮ್ಮ ಮನದಲ್ಲಿ ಠಾಣವನು ಕೊಟ್ಟು ದೇಶಭಕ್ತಿ ಯಲ್ಲಿ ಶ್ರದ್ಧೆಯನ್ನಿಟ್ಟು ನಡೆಯುವವರಾದರು.

ಸಮಯಕ್ಕೆ ಮಹತ್ವ ಕೊಡುವಲ್ಲಿ ಇಂಥ ಸಾಧಕರು ಬಹು ವಿರಳ; ಇವರು ತಮ್ಮ ಬಿಡುವಿನ ವೇಳೆಯನ್ನು ಸಾಧಕ ವ್ಯಾಯಾಮಗಳಲ್ಲಿ ಕಳೆಯು ತ್ತಿದ್ದರು. ಯಾಕಂದರೆ ಶರೀರಕ್ಕೂ ಮನಸ್ಸಿಗೂ ನಿಕಟ ಸಂಬಂಧವಿದೆ ಎಂಬುದನ್ನು ಕಂಡು ಕೊಂಡಿದ್ದರು. ಅಂತೆಯೇ ಆಸನ, ಸೂರ್ಯನಮ ಸ್ಕಾರ, ಯೋಗ ಪ್ರಾಣಾಯಾಮ ಮುಂತಾದ ಶಾರೀರಕ ಶಿಕ್ಷಣದ ಸಾಧನೆ ಯಲ್ಲಿ ಸಾಮರ್ಥ್ಯವನ್ನು ಪಡೆದರಲ್ಲದೆ ಸಾಂಘಿಕ ಶಕ್ತಿಯನ್ನು ಕೂಡಾ ಬೆಳೆಯಿಸಿಕೊಂಡರು. ಇವರಲ್ಲಿ ಸ್ವಾಭಿಮಾನ-ಸ್ವಧರ್ಮಾಭಿಮಾನವಿಷ್ಟೇ ಯಿರದೆ ಸ್ವರಾಜ್ಯಾಭಿಮಾನವೂ ಮನೆಮಾಡಿಕೊಂಡಿದೆ. ಇವರು ಗುರು ಕುಲದಲ್ಲಿ ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಸಾಮ್ರಾಜ್ಯಶಾಹಿಯನ್ನು ಹೊಡೆ ದೋಡಿಸಲು ಮಹಾತ್ಮಾಗಾಂಧೀಜಿಯವರು ಅಹಿಂಸಾಮಯ ಅಸಹಕಾರ, ಸತ್ಯಾಗ್ರಹವೆಂಬ ಅಸ್ತ್ರವನ್ನು ಧರಿಸಿ ಆಂದೋಲನ ಹೂಡಿದಾಗ ಆದರ ಗಾಳಿಯು ಸೊಲ್ಲಾಪುರಕ್ಕೆ ಬೀಸದೆ ಬಿಡಲಿಲ್ಲ ಆ ಬಿರುಗಾಳಿ ಇತಿಹಾಸಪ್ರಸಿದ್ಧ ವಾಗಿ ಹೋಯಿತಲ್ಲವೇ ? ಆ ಸಮಯದಲ್ಲಿ ಗಂಗಾಧರ ಸ್ವಾಮಿಗಳೂ- ಚೆನ್ನ ವೀರೇಶ್ವರ ಸ್ವಾಮಿಗಳೂ ಒಮ್ಮೆ ಸೊಲ್ಲಾಪುರದಲ್ಲಿ ಬೀದಿಯಿಂದ ಹೋದಾಗ ಈ ಖಾದಿಧಾರಿಗಳಾದ ಕೌಪಿನಿಗಳನ್ನು ಅಲ್ಲಿಯ ಪೋಲೀಸರು ತಡೆದು ಚೌಕಿಯ ವರೆಗೆ ಕರೆತಂದು ಕೊನೆಗೆ ಇವರು ಚಳವಳಖೋರರಲ್ಲ, ಗುರು ಕುಲದ ವಿದ್ಯಾರ್ಥಿಗಳು (ಮುಂದು ಸ್ವತಂತ್ರಭಾರತದಲ್ಲಿ ಮಹಾಸ್ವಾಮಿಗಳಾಗಿ ಜಗದ್ಗುರುಗಳಾಗಿ ಮೆರೆಯುವಂತಹ ವಿಭೂತಿಗಳು) ಎಂದು ಅವರನ್ನು ಬಿಡು ಗಡೆ ಮಾಡಿದರು. ಇದರಿಂದ ತಿಳಿದು ಬರುವದೇನಂದರೆ ಇವರಲ್ಲಿ ಮನ ವೊಂದೇ ಶುದ್ಧವಲ್ಲದೆ ವೇಷ ಭೂಷಣಗಳೂ ಸಹ ಶುದ್ಧವಿರುವವೆಂಬುದು ಹೊಳೆಯುತ್ತದೆ. ಖಾದಿಯ ಮಾಹಿತಿಯನ್ನು ಇವರು ಚೆನ್ನಾಗಿ ಅರಿತಿದ್ದಾರೆ

ಗಂಗಾಧರ ಸ್ವಾಮಿಗಳು ತಮ್ಮ ಓದನ್ನು ಸಿದ್ಧಿ ಸಾಧನೆಯನ್ನು ಮುಂದುವರಿಸುತ್ತಲೇ ಸ್ವಂತ ಮಠವಾದ ಪಾಲೀಕೊಪ್ಪದಲ್ಲಿ ಇತಿಹಾಸ ಪ್ರಸಿದ್ಧ ಹಳೇ ರಾಜಧಾನಿ ಬಾವಿಸ ಮಹಲಾದ ಬಂಕಾಪುರದ ಕಟ್ಟೀಮಠ ಶ್ರೀ ಷ ಬ್ರ ಪಟ್ಟಾಧ್ಯಕ್ಷರಾದ ಶ್ರೀ ರುದ್ರಮುನಿ ಶಿವಾಚಾರ್ಯರು, ಅರಳೇ ಮಠ ಇವರ ಶುಭಾಶಯದಿಂದ ಅಧಿಕಾರ ಸ್ವೀಕಾರ ವಹಿಸಿದರು. ಬಳಿಕ ಮಠದಲ್ಲಿ ಬದಲಾವಣೆ ಮಾಡಬೇಕೆಂದು ದೃಢೀಕರಿಸಿದರು. ಬದಲಾವಣೆ ಎಂಬುದೊಂದು ಸೋಜಿಗದ ಕತೆ ಶ್ರಿ.

ಇವರ ಮಠಕ್ಕೆ ಹೊಂದಿದ ಭಾಗದಲ್ಲಿಯ ಒಂದು ಸ್ಥಳದಲ್ಲಿ ಚೌಡಿಯು (ಬ್ರಹ್ಮಪಿಶಾಚಿ) ಇರುವಳೆಂದೂ ಅವಳನ್ನು ತೃಪ್ತಿಪಡಿಸಬೇಕಾದರೆ, ಕುರಿ-ಕೋಳಿಗಳ ಹಾರ ಕೊಡಬೇಕು ಎಂಬ ಹಿಂಸಾಚಾರವನ್ನು ಇವರು ತಮಗೆ ತಿಳಿಯುತ್ತಲೇ ಅಹಿಂಸಾ ವಾದಿಗಳಾದ ಹಟವಾದಿಗಳು ಅಸತ್ಯ- ಅನ್ಯಾಯ- ಅಧರ್ಮ-ಹಿಂಸೆಗಳಿಗೆ ಎಡೆ ಕೊಡಬಹುದೇ ? ಈ ಹಳೆಯ ರೂಢಿಯನ್ನು ಮೊದಲು ಕಿತ್ತು ಹಾಕಿ; ಆ ಚೌಡಿಯ ಸ್ಥಳದಲ್ಲಿಯೇ ಗಿಡ ಕೊಂಪೆಗಳನ್ನು ಸವರಿ ತಾವೇ ಸ್ವತಃ ಒಂದು ವಾಪಿಯನು ಅಗಿದು ಶೀತಲ ಜಲವನು ಉಂಟು ಆ ಬಾವಿಗೆ ರೇಣುಕ ತೀರ್ಥವೆಂಬ ನಾಮಕರಣ ಮಾಡಿ, ಚೌಡಿಯ ಸ್ಥಳ ವೆಂದು ಜನವೆಲ್ಲ ಅಂಜುತ್ತಿದ್ದ ಭೀಕರದ ತಾಣದಲ್ಲಿಯೇ ಅನುಷ್ಠಾನ ಮಾಡಿ ಮಕ್ಕಳು ಮರಿಗಳಿಗೆಲ್ಲ ಜನತೆಗೆಲ್ಲ ಗುರುಸ್ಥಲವನು ಮಾಡಿದರು. ಪಾಲೀಕೊಪ್ಪವನ್ನು ಪುಣ್ಯತೀರ್ಥ ಕ್ಷೇತ್ರವನ್ನಾಗಿ ಮಾಡಿದರೆಂದರೆ ಅತಿಶಯೋಕ್ತಿಯಾಗಲಾರದು

## ಸಾಧನೆ ಸಿದ್ಧಿ ಮತ್ತು ಅನುಷ್ಠಾನ

ಸ್ವಾಮಿಗಳು ಬಂಕಾಪೂರ ತಾಲೂಕ ಗಂಗೀಬಾವಿಯಲ್ಲಿ ಅನುಷ್ಠಾನ ಕೈಕೊಂಡರು: ಗಂಗೀಬಾವಿಯ ಪ್ರದೇಶವು ಏಕಾಂತದ ವನಪ್ರದೇಶವಾಗಿದ್ದು ಪುರಾತನಕಾಲದಿಂದಲೂ ಪ್ರಸಿದ್ಧವಾಗಿದೆ. ಹಿಂದಕ್ಕೆ ಜಾನ್ಹವಿ ಎಂಬ ಋಷಿಯು ತಪಸ್ಸು ಮಾಡಿ, ತಾನು ಬಾಯಿಯಿಂದ ಕುಡಿದ ನೀರನ್ನು ಕಿ

ಯಿಂದ ಬಿಡುತ್ತಿದ್ದನಂತೆ; ಅಂದಿನಿಂದಲೂ ಗಂಗೀಬಾವಿಯು ಪವಿತ್ರ ತೀರ್ಥ ಕ್ಷೇತ್ರವಾಗಿದೆ. ಈ ಸೀನಲ್ಲಿ ಜಳಕ ಮಾಡಿದರೆ ಛಳಿಜ್ವರ ಆದಿಯಾಗಿ ದೇಹಪೀಡೆ ಹೋಗುವದೆಂದು ವಾಡಿಕೆಯಿದೆ. ಇಂಥ ಋಷಿಗಳ ಯೋಗಿಗಳ ತಾಣದಲ್ಲಿ ಮೂರು ತಿಂಗಳು ಅನುಷ್ಠಾನ ವ್ರತವನ್ನು ಕೈಕೊಂಡು ಆ ಸ್ಥಳವನ್ನು ಪವಿತ್ರವಾಗಿ ಮಾಡಿದರು ತಮ್ಮ ಮನದ ದೃಢತೆಯನ್ನು ವ್ಯಕ್ತ ಮಾಡಿದರು ಇವರ ಬಗ್ಗೆ ಸೋದಾಹರಣವಾಗಿ ಹೇಳಬೇಕೆಂದರೆ ಆ ನಿಬಿಡಾರಣ್ಯದಲ್ಲಿ ವಾಸಿಸುವಂಥ ಘೋರ ವ್ಯಾಘ್ರನು ಇವರ ಅನುಷ್ಠಾನಕ್ಕೆ ಮೆಚ್ಚಿ ಪೂಜೆ ಮುಗಿಯುವ ತನಕ ಎದುರಿನಲ್ಲಿಯೇ ಕುಳಿತಿದ್ದು ಹೋಗುವಾಗ; ಇವರ ಏಕನಿಷ್ಠೆ ಕದಲಲಿಲ್ಲ ತಮ್ಮ ಸಾಧನೆ ಸಿದ್ಧಿಯನ್ನು ತೊರೆಯಲಿಲ್ಲ. ಇಂಥ ಆತ್ಮಸಂಯಮಿ ಸ್ವಾಮಿಗಳಿವರು;

—

## ಸಮಾಜ ಸೇವೆ

ನಮ್ಮ ವೀರಶೈವ ಸಮಾಜದಲ್ಲಿ ಪರಕೀಯರ ಅನುಕರಣ ಪ್ರೇರಣೆಯಿಂದಲೋ ವಿಶಿಷ್ಟ ಪಂಗಡದವರ, ಸಾಂಸರ್ಗಿಕತೆಯಿಂದಲೋ ಅನಾಚಾರ್ಯರ ಸಂಸ್ಕಾರದಿಂದಲೋ ಕೆಲವು ಹೀನ ರೂಢಿಗಳು ಸಮಾಜದಲ್ಲಿ ನೆಲೆಗೊಂಡಿರುವವಲ್ಲವೇ ? ಅಂಥವುಗಳಲ್ಲಿ ಹೋಳೀಹುಣ್ಣಿವೆಯೂ ಒಂದು; ಈ ಹಬ್ಬದಲ್ಲಿ ಸುಜ್ಞರಾದ ನಮ್ಮ ವೀರಶೈವರಾದಿಯಾಗಿ ರೈತ ಬಾಂಧವರೂ ಕೂಡ ಹೊಲೆ ಸೂಳೆಯರೊಡನೆ ಸೇರಿ ಹೋಳಿ ಬೊಬ್ಬೆ ಆಗುವ ತನಕ ಅಶ್ಲೀಲವಾದ ಬೀಬತ್ಸದ ನುಡಿಗಳನ್ನು ಆಡುವದು ಹಾಡುವದು ಕತ್ತೆಗಳ ಮೇಲೆ ಕುಳಿತು, ಮೆರವಣಿಗೆ ತೆಗೆಯುವದು. ಹೊಲೆ ಸೂಳೆಯರ ಸೋಬತಿ ಸಹ ಮಾಡುವದು. ಇನ್ನೂ ಏನೇನೋ ಅನರ್ಥಹೀನ ಆಚಾರ-ವಿಚಾರಗಳು ಈ ಹೋಳಿಯಲ್ಲಿ ಸೇರಿಕೊಂಡು ಇವೆಲ್ಲವನ್ನು ನಮ್ಮ ಸಮಾಜದವರು ಆಚರಿಸುತ್ತ ಹೊರಟಿದ್ದನ್ನು ಕಂಡು ಸ್ವಾಮಿಗಳು ಕೆರಳಿ, ನಮ್ಮ ಧರ್ಮದ ಅವನತಿಯ ಬಗ್ಗೆ ಮರುಗಿ ಭಕ್ತರನ್ನು ತಮ್ಮ ಗಮನದ ಕಡೆಗೆ ತಿರುಗಿಸಿದರು. ಅಧರ್ಮ- ಅನಾಚಾರ- ಅವಿಚಾರಗಳನ್ನು ಹೊಡೆದೋಡಿಸಿದರು.

ಲಿಂಗದ ಮರ್ಮವನ್ನು ತಿಳಿಸಿ ಹೇಳಿದರು ಸಮಾಜದವರೆಲ್ಲರಿಗೂ ಅದರಂತೆ ನಡೆಯಲು ಹಚ್ಚಿದರು ಮತ್ತು ದೀಕ್ಷಾಪದ್ಧತಿಯನ್ನು ಕೈಕೊಂಡರು. ಹಾಗು ನಮ್ಮ ಸಮಾಜದಲ್ಲಿ ಹಲವರು ದುಶ್ಚಟಗಳಿಗೆ ವಶರಾಗಿ. ಅಧರ್ಮಿಗಳು, ದುರ್ವೆಸನಿಗಳೂ ಆಗಿ ಬೀಡಿ, ಸಿಗರೇಟ, ಗಾಂಜಿ, ಅಫು, ಚಹ ಮುಂತಾದ ಮಾದಕ ಪದಾರ್ಥಗಳ ಸೇವಕರನ್ನು ಸ್ವಾಮಿಗಳು ಕಂಡು ಸ್ವತಃ ಅವರನ್ನು ಕರೆಮ ತಿಳಿ ಹೇಳಿ ದೇಹ ಮನಸು ಮಾತು ಧನನ್ಯಯ ಇತ್ಯಾದಿ ಸರ್ವಸ್ವ ಹಾನಿಯಾಗಿ ಮನೆತನ ಹೇಗೆ ನಾಶವಾಗುವದೆಂಬುದನ್ನು ಮತ್ತು ಧರ್ಮವು ಕೂಡಾ ಹೇಗೆ ಮಾಲಿನ್ಯ ಹೊಂದುತ್ತಿದೆ ಎಂಬುದನ್ನು ಸ್ಪಷ್ಟೀಕರಿಸಿ ಬೋಧೆಗೈದು ಭಕ್ತರ ಉದ್ಧಾರ ಮಾಡುವರಾದರು. ಇವರು ಪುರುಷರಿಗಷ್ಟೇ ಅಲ್ಲ ಸ್ತ್ರೀಯರಿಗೂ ಕೂಡ ತಿಳಿಸಿ ಹೇಳುವರು.

ಉದಾ:— ಜ್ಞಾನವಿಹೀನೆಯರೂ ಅಶಿಕ್ಷಿತರೂ ಆದ ನಮ್ಮ ಸಮಾಜದಲ್ಲಿಯೆ ಹಲ ಹೆಂಗಳೆಯರು ಧರಿಸುವ ಲಿಂಗದ ಕರಡಿಗೆಯಲ್ಲಿ ಅಂದರೆ ಚೌಕ ಗುಂಡಗಡಿಗೆಗಳಲ್ಲಿ ತಾವು ಹೇಸಿಗೆ ತುಳಿದಿದ್ದರೂ ಕೂಡಾ ತಮ್ಮ ಕಾಲೊಳಗಿನ ಆಭರಣಗಳಾದ ಕಾಲುಂಗರ ಪಿಲ್ಲಿ ಮುಂತಾದವುಗಳನ್ನು ತಮ್ಮ ಕೊರಳೊಳಗಿನ ಲಿಂಗದ ಸ್ಥಾನವನ್ನು ಬರಿದು ಮಾಡಿ, ಆ ಪವಿತ್ರ ಸ್ಥಾನದಲ್ಲಿ ಹೇಸಿಗೆಯಿಂದ ತುಳಿದೆದ್ದ ಆಭರಣಗಳನ್ನು ಇಟ್ಟುಕೊಳ್ಳುತ್ತಿದ್ದರಲ್ಲದೇ ಖಜಾನೆಯನ್ನೇ ಮಾಡಿಕೊಂಡು ರೊಕ್ಕ ರೂಪಾಯಿಗಳನ್ನು ಸಹ ಅದರಲ್ಲಿ ಶೇಖರಿಸಿ ಕೊರಳಲ್ಲಿ ಕಟ್ಟಿಕೊಳ್ಳುವರು. ಇದೊಂದು ಇವರ ಚಲನ ಖಜಾನೆಯಾಗಿತ್ತು. ಇಂಥ ಹೀನವೃತ್ತಿಯನ್ನು ಸ್ವಾಮಿಗಳು ಕಂಡು ಹಿಡಿದು ತಕ್ಕ ನಿರ್ಬಂಧ ಹಾಕಿದರು. ಮತ್ತೊಂದು ಸಂಗತಿ—

ಇಷ್ಟ ಲಿಂಗವನ್ನು ಅಡಕಲಗಡಗಿಯಲ್ಲಿ ಸೇರಿಸಿ, ಬರಿದು ಎಡೆಯಿಂದ ತಿರುಗುತ್ತ ಸಂಭ್ರಮ ಹಬ್ಬ-ಹುಣ್ಣಿವೆಗಳಲ್ಲಿ ಸ್ವಾಮಿಗಳನ್ನು ಬಿನ್ನಹಕ್ಕೆ ಕರೆತಂದು ಕರುಣ ಪ್ರಸಾದವನ್ನು ಪಡಕೊಳ್ಳುವಾಗ ಅಜ್ಜನದೋ; ಅಮ್ಮನದೊ ಒಂದು ಪ್ರಯತ್ನಪೂರ್ವಕವಾಗಿ ಹುಡುಕಿಕೊಂಡು ತಂದು ಅಯ್ಯನವರನ್ನು ಪಡಕೊಂಡವರ ಲಿಂಗವು ಪಾಳೆಯ ಪದ್ಧತಿಯನ್ನು ಅನುಸರಿಸುವಂಥ ಹೇಯ ವೃತ್ತಿಯನ್ನು ತೊಡೆದು ಹಾಕಿದರು.

ಸುಶಿಕ್ಷಿತರೆಂದು ಮೆರೆಯುವ ಮೇಲ್ತರದ ಉಚ್ಚ ಶಿಕ್ಷಣವನ್ನು ಪಡೆದ ಕೆಲ ಇಂದಿನ ತರುಣರು ಲಿಂಗವನ್ನು ತೊರೆದು ತಮ್ಮ ಅನಾದರವನ್ನು ವ್ಯಕ್ತ ಮಾಡುತ್ತ ಕೋಟು, ಬೂಟು, ಸೂಟು ಹ್ಯಾಟುಗಳನ್ನು ಧರಿಸಿ ಕೊಂಡು ಲಿಂಗಪೂಜೆ ಮಾಡದೆ. ಲಿಂಗಕ್ಕೆ ಎಡೆ ತೋರದೆ ಅನ್ನ ಪ್ರಸಾದ ವನ್ನು ಮಾಂಸ ಭಕ್ಷಕರಂತೆ ಸೇವಿಸುವಂಥವರ ಸಲುವಾಗಿ; ಲಿಂಗ ಮಹಿಮೆ ಯನ್ನು ತೋರಿಸಿಕೊಟ್ಟು ಅವರನ್ನು ಧರ್ಮನಿಷ್ಠರನ್ನಾಗಿ, ಮಾಡಿದರು. ಹೀಗೆ ಒಂದಲ್ಲ. ಎರಡಲ್ಲ, ಎನಿತೋ ಸುಧಾರಣೆಗಳನ್ನು ಮಾಡಿ ಹೇಳಿ ಭಕ್ತರ ಉದ್ಧಾರ ಕಾರ್ಯ ಕೈಕೊಂಡರು ಎಂಬುದು ಪ್ರತ್ಯಕ್ಷವಾದ ಮಾತಾಗಿದೆ.

## ದೇಶಸೇವೆ ಹಾಗು ನೀತಿ

"ಬೆಳೆಯ ಸಿರಿ ಮೊಳೆಯಲ್ಲಿ" ಎಂಬಂತೆ ಶ್ರೀಗಳವರು ವಿದ್ಯಾರ್ಥಿ ದೆಸೆ ಯಲ್ಲಿದ್ದಾಗಲೇ ಖಾದಿ ಬಟ್ಟೆಯನ್ನು ಕಾವಿಯಿಂದ ಲೇಪಿಸಿಕೊಂಡು ಧರಿ ಸುತ್ತ "ಕಾಯಕವೇ ಕೈಲಾಸ" ವೆಂಬುದನ್ನು ಸಾರಿ ತೋರಿಸಿದರು. ಅಲ್ಲದೆ ಇವರು ನಮ್ಮ ಸಮಾಜದವರಿಗಷ್ಟೇ ಅಲ್ಲ ಪರಮತೀಯರಿಗೂ ಸಹ ಆದರ ತೋರ್ಪಡಿಸುವಂತೆ ಮಾರ್ಗದರ್ಶಕರಾದರು ಒಬ್ಬಸ್ವಾಮಿಗಳು ಲಿಂಗಪೂಜೆ ಮಾಡದಿದ್ದುದು ಅಧರ್ಮವೆಂದು ಒಬ್ಬ ಮುಲ್ಲಾ ಸಾಹೇಬರು ಹೇಳಿದರೆ ತಪ್ಪೇನು ? ಒಬ್ಬ ಮುಲ್ಲಾನು ನಮಾಜ ಮಾಡದಿದ್ದರೆ, ಒಬ್ಬ ಆಚಾರಿಯು ಮುಲ್ಲಾಸಾಹೇಬರ ತಪ್ಪನ್ನು ಹೇಳಿದರೆ ತಪ್ಪೇನು ? ಒಬ್ಬ ಭಟ್ಟನು ಭಗ ವಂತನ ಪೂಜೆ ಮಾಡದಿರುವದನ್ನು ಒಬ್ಬ ಈಸಾಯಿಯು ನೋಡಿ ಹೇಳಿದರೆ ತಪ್ಪೇನು ? ಒಬ್ಬ ಈಸಾಯಿಯು ಚರ್ಚಿಗೆ ಹೋಗಿ ಪ್ರಾರ್ಥನಾ ಮಾಡುವ ದನ್ನು ಬಿಡುತ್ತಿದ್ದರೆ ಅದನ್ನು ಸ್ವಾಮಿಗಳು ಹೇಳಿದರೆ ತಪ್ಪೇನು ? "ಜಾತಿಗೆ ಭೇದವಿದ್ದರೂ ನೀತಿಗೆ ಭೇದವೇನು ? ಎಂಬ ಮಾತುಗಳನ್ನು ಶ್ರೀಗಳವರು ವೇದೋಪನಿಷತ್ತುಗಳ ಆಧಾರದಿಂದ ಸಿದ್ಧಪಡಿಸಿ ಸಾದರಪಡಿಸುವಲ್ಲಿ ಮೇಲ್ಮೆ ಪಡೆದರಲ್ಲದೆ ಸರ್ವಮತೀಯರ ಆದರಕ್ಕೆ ಪಾತ್ರರಾದರು ಈ ಮಾತು ಕಾಲ್ಪನಿಕವಲ್ಲ; ಕೇವಲ ಕಂಡು ಕೇಳಿದ್ದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

ಅ:ದ ಮೇಲೆ ಇವರು ಸಾಮಾಜಿಕ ಸೇವೆಯೊಂದಿಗೆ ದೇಶ ಸೇವೆಯನ್ನು ಕೂಡಾ ಮಾಡುತ್ತಿದ್ದಾರೆ. ನೀತಿಯ ನೆಲೆಗಟ್ಟನ್ನು ಪ್ರಾಯಾಭವ್ರವಾಗಿ ಮಾಡ:ನಲ್ಲ ಇಸ್ಕೀವೇತ್ರು? ಇವರು ಒರೀ ಶಹರಗಳಲ್ಲಿ ಸಂಚರಿಸದೆ ಹಳ್ಳಿ- ಹಳ್ಳಿಗೂ ಹೋಗಿ, ಭಕ್ತರ ಧರ್ಮದ ವಿಷಯಕ ಮಾಲಿನ್ಯವನ್ನು ಜೋಥೆಯೆಂಬ ಸಾಬಾಣದಿಂದ ತೊಳೆದು ನಿರ್ಮಲವಾಗಿ ಮಾಡುವರು ಎಂಬುದು ಇವರ ಸಂಚಾರದ ಸ್ಥಳಗಳ ಸಂದರ್ಭಗಳಲ್ಲಿ ವಿದಿತವಾಗುವದು

# ವ್ಯಕ್ತಿತ್ವ

ಶ್ರೀ ಗಳವರು ರಂಭಾಪುರಿಗೆ ದಯಮಾಡಿಸಿ ಅನುಗ್ರಹವನ್ನು ಪಡೆದು, ಮಂತ್ರೋಪದೇಶ ಹೊಂದಿ ನಮ್ಮ ನಾಡಿನಲ್ಲಿ ಸಂಚಾರ ಕಾರ್ಯವನ್ನು ಕೈಕೊಂಡರು ಈವಾಗ ರಂಭಾಪುರಿ ಪೀಠದ ಅಧಿಕಾರಿಗಳಾಗಿದ್ದ ಶ್ರೀ ಜಗದ್ಗುರು ಶಿವಾನಂದ ಮಹಾ ಸ್ವಾಮಿಗಳು ನಾಲ್ಕು ವರ್ಷಗಳ ಪರ್ಯಂತ ಗುರುವಿಲ್ಲದೆ ಜೀರ್ಣವಾಗಿದ್ದ ಮಠದ ಜೀರ್ಣೋದ್ಧಾರ ಕಾರ್ಯ ಕೈಕೊಂಡು ಅಧಿಕಾರ ವಹಿಸುವಾಗ ಆದ ಶ್ರಮವನ್ನು ಸಹಿಷ್ಣುತೆಯಿಂದ ಸಹಿಸಿ ಕಂದಿ-ಕುಂದಿದ ಪೀಠವನ್ನು ವೀರ ಪೀಠವನ್ನಾಗಿ ಮಾಡಿ ಮೆರೆಸುತ್ತಿರುವ ಕಾಲ; ಈ ಸ್ಥಿತಿ ಬಂದೊಡ್ಡಬೇಕಾದರೆ ಮಠಕ್ಕೆ ಯೋಗ್ಯರಾದವರು ಹಿಂದಿನ ಕಾಲಕ್ಕೆ ದೊರಕದೆ ಹಾಗೇ ಉಳಿದು ಬರ ಬರುತ್ತ ನಮ್ಮ ಸಮಾಜ ಸುಧಾರಕ ಗುರು ವರ್ಗದವರಾದ ವ್ಯಕ್ತಿಗಳು ಪ್ರಬಲರಾಗುತ್ತ ಆಚಾರ್ಯರ ಬಲವನ್ನು ಕುಗ್ಗಿಸಿ ತಾವೇ ಅಧಿಕಾರ ಸೂತ್ರಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಕೆಲ ವ್ಯಾಪಾರಿ ವರ್ಗದವರ ಭಾಂಡವಲ ಶಾಹಿಗಳ ಸೊತ್ತಾಗಿ ವೈಭವದ ಶಿಖರವನ್ನು ಮುಟ್ಟಲು ಹೊರಟು ಗುರು ಮಾಹೇಶ್ವರರನ್ನು ಹತ್ತಿಕ್ಕಿ ತಾವೇ ಧರ್ಮಪ್ರಭುಗಳೆಂದು ಭಕ್ತರ ಸುಲಿಗೆ ಗೈಯುವ ಸಮಯದಲ್ಲಿ ಈ ಪೀಠದ ಅಧಿಕಾರದ ಸಲುವಾಗಿ ಶ್ರೀಮಾನ್ ಮೈಸೂರು ಮಹಾರಾಜರುಗಳ ಮನಸು ಮತ್ತು ವೇ ಪಂ. ಕಾಶೀನಾಥ ಶಾಸ್ತ್ರಿಗಳ ವಿಶ್ವಪ್ರಯತ್ನದ ಫಲವಾಗಿ ಹಾಗೂ ಉಜ್ಜಯನಿ ಜಗದ್ಗುರುಗಳಾದ ಶ್ರೀ ಸಿದ್ಧಲಿಂಗ ಶಿವಾಚಾರ್ಯರ ತಪಃ ಪ್ರಭಾವದಿಂದ ಶಿವಾನಂದ ಸ್ವಾಮಿಗಳು ಮತಗಣನೆಯಲ್ಲಿ ಚುನಾಯಿಸಿ

ರಾಜಾಶ್ರಯವನ್ನು ಹೊಂದಿ ರಾಜ ಗುರುಗಳಾಗಿ ನಮ್ಮ ನಾಡಿನಲ್ಲೆಲ್ಲ ತಮ್ಮ ಪಾಂಡಿತ್ಯದ ಧರ್ಮ ಪ್ರಭುತ್ವವನ್ನು ನೆಲೆಗೊಳಿಸಿ, ಪರಳಿ ಪ್ರಕರಣ ಮೊದಲಾದ ಸಂದಿಗ್ಧ ಸಮಯಗಳನ್ನು ಜಯಿಸಿ ಪೀಠದ ಉನ್ನತಾವಸ್ಥೆಯನ್ನು ಪಡೆದು ಭಕ್ತರ ಉದ್ಧಾರದತ್ತ ಲಕ್ಷ್ಯವೆಳೆಯುವ ಸಮಯಕ್ಕೆ ಗಂಗಾಧರ ಸ್ವಾಮಿಗಳು ಮಹಾಸನ್ನಿಧಿಯ ಅಪ್ಪಣೆಯನ್ನು ತಲೆಯಲ್ಲಾಂತು; ತಮ್ಮ ವ್ಯಕ್ತಿತ್ವ ಪ್ರತಿಭೆಯನ್ನು ಪ್ರಕಟಗೊಳಿಸಲಸುವಾದರು [ಈ ಪೀಠದ ಹಿನ್ನೆಲೆಯನ್ನು "ವೀರಶೈವ ರತ್ನ" ಈ ಹೊತ್ತಿಗೆಯಲ್ಲಿ ಸವಿಸ್ತಾರ ಕೊಡಲಾಗಿದೆ.]

## ಅಧಿಕಾರ

ಇದೇ ಪೀಠದ ಶಾಖಾ ಮಠವಾದ ಬೆಂಗಳೂರ ಮಹಾಂತಿ ಮಠದ ಒಡೆತನವನ್ನು ಶ್ರೀ ಶಿವಾನಂದರಾಧ್ಯರು ಪಂಡಿತ ಹರೀಶ್ವರ ಶಾಸ್ತ್ರಿಗಳ ಅನುಮತಿಯಿಂದ ವಿಜಯದಶಮಿಯ ಶುಭ ದಿನದಲ್ಲಿ ಇವರ ಆಡಳಿತಕ್ಕೆ ಒಪ್ಪಿಸಿದರು. ಇದು ಮುಂದಿನ ಸೂಚನೆಯನ್ನು ತೋರ್ಪಡಿಸುವದನ್ನು ನೋಡಲೊ ಸುಗವೋ ಏನೋ ? ನೋಡಿ ಈಗೊಬ್ಬರಾಜರಿರುತ್ತಾರೆ. ಅವರು ಮುಂದಿನ ಪಟ್ಟದ ಅಧಿಕಾರ ಸೂತ್ರ ವಹಿಸುವ ಬಗ್ಗೆ ಆತನಲ್ಲಿರುವ ಸಾಮರ್ಥ್ಯವನ್ನು ಕಂಡುಕೊಳ್ಳುವದಕ್ಕೋಸ್ಕರ ಯುವರಾಜನನ್ನು ನಿಯಮಿಸುವದಿಲ್ಲವೆ ? ಹಾಗೆ ಇವರನ್ನು ಮಹಾಂತಿನ ಮಠಕ್ಕೆ ಅಧಿಕಾರಿಗಳನ್ನಾಗಿ ಮಾಡಿದರು.

## ವಿಶಾಲ ಕ್ಷೇತ್ರದಲ್ಲೂ ಒಂದೇ ದೃಷ್ಟಿ

ಸ್ವಾಮಿಗಳು ಮಹಂತಿನ ಮಠದ ಅಧಿಕಾರಿಗಳಾದವೆಂದು ಕಾಲುಕಟ್ಟಿ ಕೊಂಡವರಂತೆ, ಮಠದಲ್ಲಿಯೇ ಕೂಡ್ರಲಿಲ್ಲ. ಮತ್ತೆ ಶಾಯ್ನಾಡಿನತ್ತ ದೃಷ್ಟಿಕೋನವನ್ನು ಹೊರಳಿಸಿದರು. ಬಂಕಾಪೂರ ತಾಲೂಕ ಗಂಗೀಬಾವಿಯಲ್ಲಿ ಅನುಷ್ಠಾನ ಮುಗಿಸಿದ ನಂತರ ಬಂಕಾಪೂರಕ್ಕೇ ಮೊದಲು ದಯ

ಮಾಡಿಸಿದರು. ಆವಾಗ ಕಣ್ಣುಮುಟ್ಟಿ ನೋಡಿದವರಿಗೇ ಗೊತ್ತು ಈ ಯೋ ವರ್ಯರ ತೇಜಸ್ಸಿನ ಮುಂಬೆಳಗು; ಭವಿಷ್ಯತ್ತಿ ಜಗದ್ಗುರುಗಳನ್ನಾ ಮಾಡುವದ್ಯೋತಕವೋ ಏನೊ ? ಎಂಬಂತೆ ಇವರ ಪ್ರಥಮೋತ್ಸವ ಜಗದ್ಗುರುಗಳ ರೀತಿಯಂತೆಯೇ ಜರುಗಿತು.

ಬೈರಾಗಿಯಂತೆ ತ್ಯಾಗಿವರನು ಪಾದವನ್ನು ಬಂಕಾಪುರ ಭೂಮಿಯ ತುಳಿಸಲು ಇವರ ಪಾದ ಧೂಳಿಯಿಂದ ನೆಲ ಪವಿತ್ರವಾಯಿತು ಇವರನ್ ವಿಜೃಂಭಣೆಯಿಂದ ಪಾಲಕಿಯ ಮಹೋತ್ಸವದೊಂದಿಗೆ ದಯ ಮಾಡಿ ಕೊಂಡು ಬಂಕಾಪೂರ ಭಕ್ತರು ಇವರ ಉಪನ್ಯಾಸ ಪ್ರವಚನವನು ಆಲಿಸು ರಾದರು. ಎಲ್ಲೆಲ್ಲಿ ಭಕ್ತಿ ರಸ ಒಡೆಯಿತು., ಸೇವಕರಾಗಿ ಸೇವೆಗೈಯು ರಾದರು. ಬರ ಬರುತ್ತ ಸ್ವಾಮಿಗಳ ತಪಃಪ್ರಭಾವವು ಎಲ್ಲೆಡೆಗೂ ಬೀರು ವೀರಶೈವ ಧರ್ಮ ಜಾಗೃತಿಯ ಕಾರ್ಯವು ಭರದಿಂದ ಸಾಗುತ್ತ ನಡೆಯಿತು ಜನತೆಯಲ್ಲಿ ಜಟಾವಲ್ಕಲಧಾರಿಗಳನ್ನು ಹೊತ್ತು ಮೆರೆಯಿಸುತ್ತ ಧಾರ್ಮಿ ಸಭೆ-ಸಮ್ಮೇಲನಗಳು ಜರುಗಲಾರಂಭಿಸಿದವು

ಅತಿ ಮೊದಲನೆಯ ಉತ್ಸವವು ಬಂಕಾಪೂರದಲ್ಲಿಯೇ ಆಯಿತೆಂದು ಅಭಿಮಾನದಿಂದ ಹೇಳಬಲ್ಲೆವು; ಬಳಿಕ ಸಿಗ್ಗಾಂವಿಗೆ ದಯಮಾಡಿಸಿದರು ಅಲ್ಲಿಂದ ಹುಲುಗೂರು-ಅಕ್ಕಿ ಆಲೂರು-ಸುರಳೀಶ್ವರ-ಹಾನಗಲ್ಲ ಭಾಗಗಳಲ್ಲಿ ಉತ್ಸವ ಭಾಗಿಗಳಾಗಿ ಭಕ್ತರ ಮನೀಷೆಯನ್ನು ಪೂರ್ತಿಗೊಳಿಸಿದರು.

ರಂಭಾಪುರೀ ಜಗದ್ಗುರುಗಳ ಸಂಚಾರದೊಂದಿಗೆ ತಾವು ಇಂಬೇಕಾದ್ದ ರಿಂದ ಅವರೊಟ್ಟಿಗೆ ಚರಿಸುತ್ತ ಗುರುವರ್ಗದವರ ಮಕ್ಕಳನ್ನು ವೇದಾಧ್ಯಯನ ಶ್ರವಣ. ಪುರಾಣ-ಪಠಣಗಳಲ್ಲಿ ಪ್ರವೀಣರನ್ನಾಗಿ ಮಾಡಲು ಟೊಂಕ ಕಟ್ಟಿ ದರು. ವೇದ ಘೋಷಗಳನ್ನು ದನಿಗೂಡಿಸಲು ನಮ್ಮ ಜಂಗಮರ ಮಕ್ಕಳು ಕಲಿಯಲಿಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟರು ಪಾಠಶ ನಿರ್ಮಾಣ ವಾಗ ತೊಡಗಿದವು [ವೇ. ಪಂ ಧರ್ಮಭೂಷಣ ಹರೀಶ್ವರ ಶಾಸ್ತ್ರಿ ಗಳಂತಹರು ಈ ಕಾರ್ಯದಲ್ಲಿ ನೆರವಾದರು.] ಮತ್ತು ಶಾಸ್ತ್ರಿಗಳು ರಂಭಾ ಪುರಿ ಸಂಸ್ಥಾನದ ಎಜೆಂಟರೂ ಆಗಿ ಕೆಲಸ ಸಾಗಿದ್ದರು [ಪಾಠಶಾಲಾಧ್ಯಾಪ ಕರೂ ಆಗಿದ್ದರು ]

ದೇಶಸೇವಕರಾದ,



ಶ್ರೀ ಜಗದ್ಗುರು
ಪ್ರಸನ್ನ ರೇಣುಕ ವೀರಗಂಗಾಧರ ಶಿವಾಚಾರ್ಯರು.

## ಬಂಕಾಪೂರ ತಾಲೂಕ ಗಂಗೀಬಾವಿಯಲ್ಲಿ



— ಶ್ರೀ ಜಗದ್ಗುರು —

ಪ್ರಸನ್ನ ರೇಣುಕ ವೀರಗಂಗಾಧರ ಮಹಾಶಿವಾಚಾರ್ಯ

ತಪೋಯೋಗಿಗಳು.



ವಿಭೂತಿಪುರ ಮಠದಲ್ಲಿ ಶಿವಧ್ಯಾನಸಕ್ತರಾದ,



ವೀರಗಂಗಾಧರ ಮಹಾಶಿವಯೋಗಿಗಳು,

೩೩

# ತಪೋನಿಷ್ಠೆ

ಬಂಕಾಪುರದ ದಕ್ಷಿಣಕ್ಕೆ ಎರಡು ಮೈಲಿನ ಮೇಲೆ ಚಿಕ್ಕದೊಂದು ಗಿರಿಯುಂಟು. ಈ ಗಿರಿಯ ತುದಿಯಲ್ಲಿ ಪೂರ್ವ ಭಾಗಕ್ಕೆ ಕುಂದಲಿಕಾಂಬಿಯ ದೇಗುಲವುಂಟು ಹಾಗೂ ಈ ಚಿಕ್ಕ ಗಿರಿನಿವಾಸದ ಮೂಡಣಕ್ಕೆ ಕುಂದೂರು ಪಶ್ಚಿಮ ಭಾಗಕ್ಕೆ ಕೋಟ್ಯೇಶ್ವರನ ದೇವಾಲಯ ಉಂಟು ಮತ್ತು ಪಡುವಣಕ್ಕೆ ಗುಡ್ಡದ ಜೆನ್ನಾಪುರ ಒಡಗಣ ದಿಕ್ಕಿಗೆ ಬಂಕಾಪುರವು, ತೆಂಕಣ ದಿಕ್ಕಿಗೆ ನೀರಲಗಿ ಹೀಗೆ ಹತ್ತಿರದ ಹಳ್ಳಿಗಳ ತನ್ಮಧ್ಯ ತಪಕ್ಕೆ ತಕ್ಕ ಭೂಮಿಯುಂಟಲ್ಲವೆ? ಈ ಗುಡ್ಡದಲ್ಲಿ ಸ್ವಾಮಿಗಳು ತಪಸ್ಸನ್ನಾಚರಿಸಲು ವಾಸ ಮಾಡಿದ್ದರು.

ಈ ಮೊದಲು ಇವರು ಆಲೂರ ಆದಿಯಾಗಿ ಸಂಚಾರ ಮಾಡುತ್ತ ಸುರಳೇಶ್ವರದಲ್ಲಿ ಒಂದು ಮನೆಯಲ್ಲಿ ಅನುಷ್ಠಾನ ಮಾಡಿ ಭೂತ ಪೀಡೆಯನ್ನು ಪರಿಹಾರ ಮಾಡಿದರು. ಅನಾಚಾರದಿಂದ ಮಾತ್ರ ಭೂತಗಳು ಸಮಸ್ತರನ್ನು ಕಾಡುತ್ತವೆ. ಭೂತಗಳು ಪ್ರತ್ಯಕ್ಷ ಕಾಣದಿದ್ದರೂ ಅಪ್ರತ್ಯಕ್ಷ ಇದ್ದೇ ಇವೆ. ಇಂಥ ಭೂತ ಪಿಶಾಚಿಗಳು ಸದಾಚಾರದಿಂದ ನಡೆಯುವರ ಬಳಿ ಹಾಯಲಾರವು. ಎಂಬುದನ್ನು ಪ್ರತ್ಯಕ್ಷ ಪಡಿಸಿದರು. ಬಳಿಕ ಇವರು ಊರೂರು ಚರಿಸಿ ಸೊಲ್ಲಾಪುರಕ್ಕೆ ಹೋಗಿ ಬರುತ್ತಲೇ ಶ್ರೀಯವರ ಮೈಯಲ್ಲಿ ಉಷ್ಣವಾಯು ರೋಗದಿಂದ ಬಳಲುವಂಥ ವೇಳೆ ಒದಗಿತ್ತು. ಬಂಕಾಪುರದಲ್ಲಿ ವೇ. ಮಂ. ಹರೀಶ್ವರ ಶಾಸ್ತ್ರಿಗಳ ಮನೆಯಲ್ಲಿಯೇ ಮೂರು ತಿಂಗಳ ಪರ್ಯಂತ ಉಪಚಾರ ಹೊಂದಿ ರೋಗದಿಂದ ವಾಸಿಯಾದರು. ಈಗ ಮಾಮಲೆದಾರರಾಗಿರುವ ಗಂಗಾಧರಪ್ಪ ಹೊಂಗಿ ಸುಣಕಲ್ಲ ಬಿದರಿಯವರು ಹಾನಗಲ್ಲನಲ್ಲಿ ಶಿರಸ್ತೇದಾರರಾಗಿದ್ದವರು ರೋಗ ನಿವಾರಣಕ್ಕಾಗಿ ಬಹು ಮಟ್ಟಿಗೆ ತುಂಬಾ ಸಹಾಯಕರಾದರು, ಅವರ ಉಪಕಾರವು ಚಿರಸ್ಮರಣೀಯವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು ಇವರೇ ಹಾನಗಲ್ಲ ಉತ್ಸವದಲ್ಲಿ ಉಪನ್ಯಾಸಾದಿಗಳಿಗೆ ಕಾರಣೀಭೂತರಾಗಿದ್ದರು. ಮತ್ತು ಸ್ವಾಮಿಗಳು ನಿಂದಕರು, ನಿತ್ಯ ಸುಖದಾಯಕರು ಎಂಬ ಪಾಠವನ್ನು ತೋರಿಸಿಕೊಟ್ಟರು

ಹಾಗೂ ಜೀರ್ಣವಾಗಿ ಹೋಗಿದ್ದ ಕೊಟ್ಟೂರ ಬಸವೇಶ್ವರ ದೇವಾಲಯ ಪುನರುಜ್ಜೀವನ ಕಾರ್ಯವನ್ನು ನೆರೆ ಹಳ್ಳಿಯ ಭಕ್ತರ ಸಂಘಟನೆ ಮಾಡಿ ಮುಗಿಸಿದರು. ಈ ಕಾರ್ಯದಲ್ಲಿ ಕುಂದೂರು ಭಕ್ತರು ವಿಶೇಷ ಆಸ್ಥೆ ವಹಿಸಿ ಗುಡಿಯನ್ನು ಸುಂದರವೂ ಸ್ವಚ್ಛವೂ ಆಗುವಂತೆ ಮಾರ್ಪಡಿಸಿದರು. ಸ್ವಾಮಿಗಳ ಬಳಿ ಎಷ್ಟೋ ಭಕ್ತರು ಭಜನಾ ಸಂಘ ಸಮೇತವಾಗಿ ಭೆಟ್ಟಿ ಕೊಡುತ್ತ ವೇದೋಪನ್ಯಾಸವನು ಕೇಳುವರಾದರು. ಉತ್ತಮ ಆಚರಣೆಯುಳ್ಳವರಾದರು

ಸ್ವಾಮಿಗಳು ಮುಂದೆ ಇಲ್ಲಿಂದ ಕಬನೂರಿಗೆ ಪ್ರಯಾಣ ಬೆಳಸಿದರು. ಇಲ್ಲಿ ಒಂದು ಸಭೆ ಕೂಡಿಸಿ ಸಮಸ್ತ ಭಕ್ತಜನರಿಗೆ ಬೋಧೆ ಮಾಡಿದರಲ್ಲದೆ ಪುರಾಣ ಶ್ರವಣವನು ಮಾಡಿ ಎಲ್ಲರಿಗೂ ಧರ್ಮದ ಮರ್ಮವನು ತಿಳಿಸಿ ಹೇಳಿದರು. ಬಳಿಕ ಬೆಂಡಿಗೇರಿಗೆ ದಯ ಮಾಡಿಸಿದರು. ಇಲ್ಲಿ ಊರ ಸಮೀಪದ ಬನದಲ್ಲಿ ಕಂಬಾಳಿ ತೋಪು ಎಂದು ಹೆಸರಾಂತ ಮಾವಿನ ವನದಲ್ಲಿ ಅನುಷ್ಠಾನವನ್ನು ಮಾಡಿದರು. ಈ ಭಾಗದಲ್ಲಿಯ ಭಕ್ತರಿಗೆ ದರ್ಶನಾಶೀರ್ವಾದಗಳನ್ನು ನೀಡಿ ಪ್ರಯಾಣ ಬೆಳಸಿ ರೇವಣಸಿದ್ಧ ಬೆಟ್ಟ, ಮೈಸೂರನಾಡಿನಲ್ಲಿ ಅನುಷ್ಠಾನ ಮುಗಿಸಿ, ಮುಂದೆ ವಿಭೂತಿಪುರ ಮಠಕ್ಕೆ ಬಿಜಯಂಗೈದರು. [ಬೆಂಗಳೂರಿಗೆ ಹೋದರು.] ಇಲ್ಲಿ ಬಹಳ ಘನತರವಾದ ತಪೋನಿಷ್ಠೆಯನ್ನು ಆಚರಿಸಿದರು. ಇವರು ಜಪ ಕುಳಿತ ವೇಳೆಯಲ್ಲಿ ಹರಿಯುವ ಸರ್ಪವು ಇವರಿಗೆ ಸುತ್ತು ಹಾಕಿ ತಪಸ್ಸಿಗೆ ಭಂಗವನ್ನು ತಂದೊಡ್ಡಿತು. ಈ ದೃಶ್ಯವನ್ನು ಅಲ್ಲಿಯೇ ಇದ್ದ ಎಷ್ಟೋ ಭಕ್ತರು ಕಣ್ಮುಟ್ಟ ಕಂಡಿದ್ದಾರೆ. ಕಡೆಗೆ ಜಪಿಸುವ ಕಾಲದಲ್ಲಿ ಜಪ ಮಣಿಗಳು ಸರಿದಾಡದಂತಾಗಲು ಶ್ರೀಯವರು ಕಣ್ಣು ತೆರೆಯುವಷ್ಟರಲ್ಲಿ ಹಾವು ಹೆಡೆ ತೆರೆದು ಆಡಿ ಜನಸಂದಣಿಯೊಳಗಿಂದಲೇ ನುಗ್ಗಿ ಹೊರಡಲು ಅದನ್ನು ಹೊಡೆಯಬೇಕೆಂದು ಮನಸುಮಾಡಿದ ಜನತೆಗೆ ಸ್ವಾಮಿಗಳು ಬೇಡವೆಂದು ಕೈಸನ್ನೆ ಮಾಡಿ ಪ್ರಾರ್ಥಿಯಾಗಲು ಅನುಷ್ಠಾನವನ್ನು ಮುಂದುವರಿಸಿ ಸಿದ್ಧಿಯನ್ನು ಪಡೆದರು.

ತನ್ನ ಯೋಗ-ಪೂಜೆಗಳ ಪ್ರತಿ ಫಲಕ್ಕಾಗಿ ಆಶೆ-ಆಕಾಂಕ್ಷೆಗಳನ್ನಿಟ್ಟುಕೊ ಬಾರದು. ಒಂದು ವೇಳೆ ಅಧಿಕಾರ ವ್ಯಾಮೋಹದ ಸೆಳವಿಗೆ ಬಿದ್ದರೆ ಸ್ವಾಮಿ ವೆಂಬುದು ಅರೆಕ್ಷಣದಲ್ಲಿ ಮಣ್ಣಿನ ಕೂಡ, ಮಣ್ಣಾಗಿ ಹೋಗದೆ ಉಳಿಯದು ಗುರು ಎಂಬುವನು ಭಕ್ತರನ್ನಾಳುವವನಲ್ಲ; ಭಕ್ತರ ಆಚಾರ-ವಿಚಾರಗ ನ್ನರಿತು ಅವರನ್ನು ಪ್ರಗತಿಪಥದಲ್ಲಿ ಮುನ್ನಡಿಯಿಡಿಸುವ ಮಹಾಸ್ವಾಮಿ ಭಕ್ತೋದ್ಧಾರಕ ಇದನ್ನರಿತು ನಾವು ನಡೆದರೆ ನಮ್ಮ ಭಾಗ್ಯಕ್ಕೆ ಏನು ಕಡಿಮೆ ಯಿದೆ, ಎಂದು ಹೃದಯ ವೀಣೆಯಿಂದ ಅಂತರಾತ್ಮನ ದನಿಯನ್ನು ನುಡಿ ಭಕ್ತ ಸಂಜೀವನೂ ನಿರ್ಮಲಭಾವನೂ- ಗುರುದೇವನೂ ಆದಂಥ ಯೋ ವನು ಮುಕ್ತಿ ಮಂದಿರ ವಾಸನಾಗಿ ಧರ್ಮೋದ್ಧಾರವಗೈಯಲು ನಾಡೋ ಸಂಚರಿಸಿ ಧರ್ಮವನು ಬೋಧಿಸುವ ಗಂಗಾಧರ ಶಿವಾಚಾರ್ಯ ಸ್ವ ರವೂ ಮಹಂತಿನ ಮಠದೊಡೆಯನೂ ವಿಭೂತಿ, ರುದ್ರಾಕ್ಷಿಭೂಷಿತ ದಂಡ ಮಂಡಲಧಾರಿಯೂ ಗುರುಜನದೊಳ್ ಶೋಭಿಸುವ ಸಂತರ ವೀರ ವೈರಾ ಮೂರ್ತಿ ಸ್ವಾಮಿವರ್ಯರು ಮುಕ್ತಿ ಮಂದಿರದ ರೂಪರೇಷೆಯ ನಿರ್ಮಾತೃ ರಾದರು.

# ಮುಕ್ತಿ ಮಂದಿರದ ರೂಪರೇಷೆ ಗುರಿಗಮ್ಯಗಳು

ಮುಕ್ತಿ ಮಂದಿರ ಸ್ಥಾಪನೆಯ ಕಾರ್ಯಕ್ಕಾಗಿ ವನಸಿಗ್ಗಲಿ ಕೂಡ್ಲಮಠ ದಾನಶೂರ ಸಿದ್ಧಯ್ಯನವರೂ ಭಂಡಿವಾಡ ಕೆಂಚಪ್ಪನವರೂ, ಕಲ್ಲಪ್ಪ ಕೊ ಹೂಡ ಹರ್ಲಾಪೂರ ಅಲ್ಲದೆ, ಪಶುಪತಿಹಾಳದ ವಡಕಣ್ಣನವರ ಬಸಪ್ಪ ನವರೂ ಆದಿಯಾಗಿ; ಸೇವಕರ ತನು, ಮನ, ಭೂ, ಧನಗಳ ಸಹಾಯದಿಂದ ಕಟ್ಟಡದ ಕಾರ್ಯವು ಪ್ರಾರಂಭವಾಗಿ; ಮಠ, ಮಂದಿರ, ಭಾವಿ ಅಲ್ಲದೆ ಗೋಶಾಲೆ, ಪಾಠಶಾಲೆ, ಸತ್ರಿಯ ವನಗಳು ನಿರ್ಮಾಣವಾದವು. ಈ ಮಂದಿರದ ಸಮಾಪ್ತಿಯುತ್ಸವವು ಪಂಚಾಚಾರ್ಯರಾಧ್ಯರ ಶಿಲಾಪ್ರತಿಮೆ ಗಳನ್ನು ಮೈಸೂರ ಪ್ರಸಿದ್ಧ ಶಿಲ್ಪಿಗಳಿಂದ ಶಾಸ್ತ್ರೋಕ್ತವಾಗಿ, ರಚಿಸಿ ಸುಂದರ ವಾಗಿ ಭಕ್ತಿರಸ ಪರವಶರೆನಿಸಿ ಎಂಥ ಕಲ್ಲೆದೆಯವರು ಸಹ ತಲೆಬಾಗುವಂತೆ

ಸೊಬಗುಳ್ಳ ಮೂರ್ತಿಗಳನ್ನು ಲಕ್ಷ್ಮೇಶ್ವರದಿಂದ ಒಂದು ಸಾವಿರದಾ ಒಂದು ಎತ್ತಿನ ಐದುಬಂಡಿಗಳ ಮೆರವಣಿಗೆಯಿಂದ ತಂದು ಸ್ಥಾಪನೆ ಮಾಡಬೇಕೆಂಬ ಸಂಕಲ್ಪವಿತ್ತು. ಆದರೆ ಐದಾರು ಸಾವಿರ ಮೇಲ್ಪಟ್ಟು ಎತ್ತುಗಳ ಮೆರವಣಿಗೆಯ ಸಾಲು ಕೂಡುವ ಭಾಗ್ಯ ಲಭಿಸಿತು. ಅಂದರೆ ಲಕ್ಷ್ಮೇಶ್ವರದಿಂದ ಮುಕ್ತಿ ಮಂದಿರದ ತನಕ ಎತ್ತುಗಳ ಸಿಂಗರಿಸಿದ ಸಾಲು ಕಂ... ಬೇಕಾದರೆ ಮಹಾ ಸ್ವಾಮಿಗಳ ಮೇಲಿರುವ ಜನತೆಯ ಭಕ್ತಿ ಅದಾಗಲು ತೋರ್ಪಡಿಸುವವಲ್ಲದೆ ... ಚಲವಾದ ಶ್ರದ್ಧೆಯುಂಟಾಗುವವೇ ... ಉದ್ದೇಶವಾಗಿದೆ

ಮಾಘಮಾಸದ ಕಾಲದ ಈ ಉತ್ಸವ ಸಮಯಕ್ಕೆ ... ಬಿಸಿಲು ಹೊಡೆಯುತ್ತಿತ್ತು. ನೀರಿನ ಅಭಾವದ ಎರೆನಾಡಿನಲ್ಲಿ (ಬೈಲುಶೀಮೆಯಲ್ಲಿ) ಈ ಹಿಗ್ಗಿನ ಹಬ್ಬದಲ್ಲಿ ಹದಿನೈದು ಇಪ್ಪತ್ತು ಸಹಸ್ರ ಜನರ ಹಿರಿಸೆ ನೀರಿನ ಪೂರೈಕೆ ತಂಬಂತೆ ರೇಣುಕರ ಕೃಪೆಯಿಂದ ಜಾತ್ರೆಯ ಮೊದಲಿಗೆ ಮಳೆ ಹೊಡೆದು ಬಿಟ್ಟಿತ್ತು. ತನ್ಮೂಲಕ ಯಾರಿಗೂ ನೀರಿನ ತೊಂದರೆಯಾಗಲಿಲ್ಲ ಎಲ್ಲ ಜನರಿಗೂ, ದನಗಳಿಗೂ ಸಾಕಷ್ಟು ನೀರು ಪುರುವಟೆಯಾಗುವ ವ್ಯವಸ್ಥೆ ತಾನಾಗಿಯೇ ಏರ್ಪಟ್ಟಿತ್ತು. ಅಲ್ಲದೆ ಅನ್ನಪ್ರಸಾದಕ್ಕಾಗಿ ಭಕ್ತ ಸಮುದಾಯವು ಚಕ್ಕಡಿಗಳನ್ನು ತುಂಬಿ, ತುಂಬಿ ತಂದ ಶಿವಪ್ರಸಾದವು ಸ್ವಯಂವೇದ್ಯವಾಗಿ ದಾಸೋಹ ಸಿಂಹಾಸನವಾಗಿ ಆನಂದಯುಕ್ತರನ್ನಾಗಿಸಿ ನೆರೆದ ಜನಸಂದಣಿಯನ್ನು ತಣಿಸಿತು.

ಪ್ರಸಿದ್ಧ ಪಂಚಾಚಾರ್ಯ ಭಜನಾಸಂಘ, ತರುಣಸಂಘ, ನಾಟ್ಯಸಂಘಗಳ ಗುಂಪು ಕೂಡಿತ್ತು. ಉಪನ್ಯಾಸ ಪ್ರವಚನಗಳು ಏರ್ಪಟ್ಟಿದ್ದವು. ಭಜನಾ ಸಂಘದವರು ತಮ್ಮ ತಮ್ಮ ಸುರಾಗಗಳಲ್ಲಿ, ಹೇಳುವ ರೇಣುಕ ಗೀತೆಯ ನಿನಾದವು ಎಲ್ಲೆಡೆ ಪಸರಿಸಿತ್ತು. ಈ ಸಂದರ್ಭದಲ್ಲಿ ಬಂಕಾಪೂರ ಪಂಚಾಚಾರ್ಯ ಭಜನಾ ಸಂಘದವರು ನೂತನ ಭಜನಾವಳಿಗಳನ್ನು ರಚಿಸಿದ ವೃಕ್ಷಭೇಂದ್ರ ಕವಿಕೃತ "ಗುರು ನೀನೆಗತಿ ನನ್ನ ದೇವ ರೇಣುಕನಯ್ಯಾ" ಮತ್ತು "ಪರಿಪಾಲಿಸುಗುರುದೇವಾ" ಹಾಗೂ: ಮುಕ್ತಿಮಂದಿರದವಾಸಾ" ಎಂಬ ಸೂರಿ ಹರೀಶ್ವರ ಕವಿಕೃತ ಗೀತೆಗಳನ್ನು ಸರಳ ಮತ್ತು, ಸಹಜ ಶೈಲಿಯಲ್ಲಿ

ಹಾಡಿ ಉತ್ಸವದಲ್ಲಿ ಸಭಾಸ್ಥಾನಕ್ಕೆ ಕಳೆ ತಂದು ಕೊಟ್ಟ ಬಹುಭಾಗವು ಬಂಕಾ ಪೂರ ಭಜನಾ ಸಂಘಕ್ಕೆ ಸಲ್ಲುತ್ತಿಂದೆ; ಈ ಮಾತು ಹೇಳಲು ನವ ಗೂ ಹೆಮ್ಮೆ ಯೆನಿಸುವದು ಸ್ವಾಮಿಗಳನ್ನು ಭಜನಾ ನಿನಾದವು, ತಲೆದೂಗುವ ಪ್ರಾಣಿ ತಲ್ಲೀನಗೊಳಿಸಿತು ಹೀಗೆ ಇಂದ್ರನ ನಂದನದ ಸೌಂದರ್ಯದ ರಮಣೀಯ ರಮ್ಯತೆಯನ್ನು ನೋಡಲಿಕ್ಕೆ ಒದಗಿಸಿದ್ದರು ಎಂತೆಯೇ ಈ ಗುರುಗಳು ವೀರಶೈವ ಧರ್ಮದ ಉಸಿರಾಗಿ ಉದಾರ ಹೃದಯದ ಭಕ್ತರ ದೇಣಿಗೆಯ ಆಮಿಷದಿಂದ ಮುಕ್ತಿ ಮಂದಿರದ ನಿರ್ಮಿತಿಯನ್ನು ನಿಲ್ಲಿಸಿದರು

ಇಲ್ಲಿಯ ಪಾಠಶಾಲೆಗೆ ಶಾಸ್ತ್ರಿಗಳನ್ನು ನಿಯಮಿಸಿ ಆಧ್ಯಾತ್ಮ ಶಿಕ್ಷಣಕ್ಕಾಗಿ ಬಂದ ವಿದ್ಯಾರ್ಥಿಗಳಿಗೆ ಉಚಿತವಾಗಿ ವೇದಾಧ್ಯಯನ ಜ್ಯೋತಿಶ್ಶಾಸ್ತ್ರಗಳ ಪುರಾಣ-ಪುಣ್ಯಕಥೆಗಳ ಶ್ರವಣಕ್ಕೆ ಹಾದಿಯನ್ನು ತೋರಿಸಿದರು ಗೋಶಾಲೆ ಯನ್ನು ತೆರೆದು ಭಾರತದ ಸಂಪತ್ತಾದ ಗೋಧನವನ್ನು ಉಚ್ಚ ಜಾತಿಯ ಮೇಲಾದ ದನಗಳನ್ನು ಸಾಕಿದ್ದಾರೆ ಇದರಿಂದ ಶಾಸ್ತ್ರೋಕ್ತ ಭಸ್ಮವನ್ನು ಸಹ ತಯಾರಿಸಿ, ಭಟ್ಟಿಯ ಘಟ್ಟಗಳನ್ನು ಮಾಡುವ ಯೋಜನೆಯನ್ನು ಮಾಡುವವರಿದ್ದಾರೆಂದು ಆಶಿಸಲಾಗಿದೆ.

ಇದು ಮುಕ್ತಿ ಮಂದಿರವಲ್ಲವೆ ? ಇಲ್ಲಿ ಪುರುಷರಿಗಷ್ಟೇ ಅಲ್ಲ ಸ್ತ್ರೀಯ ರಿಗೂ ಸಹ ನೀತಿ ಬೋಧೆಯಾಗಬೇಕೆಂದು, ತಾಯಿ ಪಾರ್ವತಿ ಬಳಗಳಲ್ಲಿ ಲಕ್ಷ್ಮೇಶ್ವರ ದೇಸಾಯಿಣಿಯವರಾದ ಧರ್ಮಚಂದ್ರಿಕಾ ಪರಮ ಸುಶೀಲೆ ತಾಯಿ ಪಾರ್ವತಿದೇವಿಯವರು ಅಗ್ರೇಸರರಾದರು ಮೊದಲ ಬಳಗವನು ಸಂಘಟಿಸಿದರು ಇದರ ಮುಖಾಂತರ ಧಾರ್ಮಿಕತೆಗೆ ಮೆರಗು ತಂದು ಕೊಟ್ಟವರಲ್ಲಿ ಮೊದಲ ಮಣಿಗಳು ಈ ಬಳಗದ ಪ್ರಭಾವವು ಬಂಕಾಪುರದ ಹೆಂಗಳೆಯರ ಮನಃಪಟದ ಮೇಲೆ ಮೂಡಿ, ತಾಯಿ ಪಾರ್ವತಿ ಬಳಗದ ಬೀಜವನ್ನು ಬಿತ್ತಿ ಇದೀಗ ಸಸಿಯನ್ನಾಗಿ ಬೆಳೆಸುತ್ತಿದ್ದಾರೆ. ಅಂದ ಮೇಲೆ ಮಹಾ ಸ್ವಾಮಿಗಳ ಸಾಧನೆ-ಸಿದ್ಧಿ-ತಪೋನಿಷ್ಠೆಯು ಇಂತಹ ಘನತರ ಕಾರ್ಯ ಕೈಕೊಂಡಿದೆಂದರೆ ಅತಿಶಯೋಕ್ತಿಯಿಲ್ಲ

ಶ್ರೀಗಳವರು ತಮ್ಮ ದಾರಿ ಗುರಿಗಳನ್ನು ಮೂರ್ತ ಸ್ವರೂಪಕ್ಕೆ ತರಲು ಸದಾ ಧ್ಯಾನ ಮಗ್ನರಾಗಿರುತ್ತಾರೆ ಮುಕ್ತಿ ಮಂದಿರದಲ್ಲಿ ಆಧ್ಯಾತ್ಮ ಶಿಕ್ಷ

ಅವರ ಜೊತೆಗೆ ಭಕ್ತರ ಮಕ್ಕಳಿಗೆ ಲೌಕಿಕ ಶಿಕ್ಷಣವೂ ಕೂಡಾ ಇಲ್ಲಿಯೇ ದೊರೆಯುವ ವ್ಯವಸ್ಥೆ ಮಾಡಬೇಕೆಂದು ಇಚ್ಛೆ ಪಡುತ್ತಾರೆ ಅಂದೊಮ್ಮೆ ಜಗತ್ತಿನಲ್ಲಿ ಭಾರತಖಂಡದಲ್ಲಿ ತಲೆಯೆತ್ತಿ ಮೆರೆದ ನಾಲಂದ ವಿಶ್ವವಿದ್ಯಾಲಯದ ನೆನಪು ತಂದು ಕೊಡಬೇಕು ಎಂಬುದು ಅವರ ಹಂಬಲ; ಇದಕ್ಕಾಗಿ ಭಕ್ತರ ದಾನಶೂರರು, ಕೊಡಗೈ ದೊರೆಗಳ, ಸಹಾಯ ಸಹಕಾರಗಳ ನೆರವನ್ನು ನೀಡಿ ಮುಕ್ತಿ ಮಂದಿರವು ಊರ್ಜಿತಾವಸ್ಥೆಗೆ ಬರಲೆಂಬುದು ಹಿರಿಯಾಸೆ

ಸ್ವಾಮಿಗಳು ರಂಭಾಪುರಿ ಪೀಠದ ಯುವರಾಜ ಸ್ಥಾನದಲ್ಲಿಯೇ ಎಂಬಂತೆ ಬೆಂಗಳೂರ ಮಹಾಂತಿನ ಮಠದೊಡೆಯರಾಗಿ ತಮ್ಮ ವ್ಯಕ್ತಿತ್ವವನ್ನು ವ್ಯಕ್ತ ಪಡಿಸುತ್ತಿರುವ ಹೊತ್ತಿಗೆ ಶ್ರೀ ಜಗದ್ಗುರು ಶಿವಾನಂದ ಶಿವಾಚಾರ್ಯರ ಜೊತೆಗೆ ಕಾಶೀ ಪೀಠದವರ ಅಧಿಕಾರ ಸ್ವೀಕಾರಕ್ಕಾಗಿ ಕಾಶಿಗೆ ದಯಮಾಡಿಸಬೇಕಾಯಿತು ಕನ್ನಡ ನಾಡಿನಿಂದ ಕಾಶಿಯ ವರೆಗೆ ತಮ್ಮ ಪ್ರಭಾವವನ್ನು ಬೀರಿದರು

ಕಾಶಿಯಿಂದ ಮರಳಿ ಬಂದ ಕೆಲವು ದಿನಗಳ ಮೇಲೆ ಶಿರೂರ, ಸಂಕ್ಷಿಪೂರ, ಲಕ್ಷ್ಮೇಶ್ವರ, ಚಿಂಚಲಿ, ಬೂದಿಹಾಳ, ಪಶುಪತಿಹಾಳ ಈ ಎಲ್ಲ ಊರುಗಳ ಸಂಚಾರ ಕಾರ್ಯ ಅನುಷ್ಠಾನ ಉಪನ್ಯಾಸಾದಿಗಳನ್ನು ನೆರವೇರಿಸುತ್ತಲೇ ಬೂದಿಹಾಳದಲ್ಲಿ ಶಿವ ಮಹಾ ಪುರಾಣದ ಶ್ರವಣಾದಿ ಸಮಾಪ್ತಿಗೊಳಿಸಿದರು. ಬಳಿಕ ಪಾಲಿಕೊಪ್ಪಕ್ಕೆ ದಯಮಾಡಿಸಿ ಮಠವನ್ನೇ ಆಶ್ರಮ ಮಾಡಿಕೊಂಡು ಅನುಷ್ಠಾನಾದಿಗಳನ್ನು ಮಾಡಿದರು. ತಾವೇ ಅಗೆದು ತೋಡಿದ ರೇಣುಕ ತೀರ್ಥದ ಜಲಾಭಿಷೇಕದಿಂದ ಮಜ್ಜನಗೈದು ಪೂಜೆ-ಜಪ-ತಪಗಳನ್ನು ಕೊನೆಗಾಣಿಸಿದರು. ಶಿರೂರಲ್ಲಿ ರುದ್ರಾಭಿಷೇಕ ಮಾಡಿಸಿದರು. ಹೀಗೆ ಪಯಣದಿಂದ ಮಹಾಂತೀನಮಠಕ್ಕೆ ಬೆಂಗಳೂರಿಗೆ ದಯಮಾಡಿಸಿದರು. ಇದೆ ವೇಳೆಗೆ ರಂಭಾಪುರಿಯ ಕರೆ ಬಂದಿತು.

# ಪೀಠಾಧಿಕಾರ ಸ್ವೀಕಾರ

ಈ ಹಿಂದೆ ಹೇಳಿದ ಶ್ರೀ ಜಗದ್ಗುರು ಶಿವಾನಂದ ಮಹಾರಾಜೇಂದ್ರ ಸ್ವಾಮಿಗಳವರು ಶಿವಾಧೀನರಾಗುವ ಅವಸಾನಕಾಲವು ಸಮೀಪಿಸಿತ್ತು ಉಳಿದ ಪೀಠಾಧೀಶ್ವರರಿಗೂ ತಿಳಿಸಲಿಕ್ಕೆ ಅವಧಿಯೇ ಇರಲಿಲ್ಲ. ಇಂಥ ಕಠಿಣ ಪರಿಸ್ಥಿತಿಯಲ್ಲಿ ತಾವು ಮನಮೆಚ್ಚಿ ಪೀಠಕ್ಕೆ ತಕ್ಕವರಾದಂಥ ಬೆಂಗಳೂರ ಮಹಾಂತಿನಮಠದ ಪಟ್ಟಾಧ್ಯಕ್ಷ ಶ್ರೀ ಷ. ಬ್ರ. ಶ್ರೀ ಪೂಜಾನಿಷ್ಠರೂ, ಭೀಷ್ಮ ಬ್ರಹ್ಮಚಾರಿಗಳೂ, ಪರಮ ವೈರಾಗ್ಯಶೀಲರೂ, ಪಂಡಿತರೂ ಆದಂಥ ಶ್ರೀ ಗಂಗಾಧರ ಸ್ವಾಮಿಗಳವರೇ ಯೋಗ್ಯರೆಂಬುದನ್ನು ಮೊದಲೇ ಮನಗಂಡು ಮಹಾಂತಿನಮಠದ ಅಧಿಕಾರಕೊಟ್ಟು ನೋಡಿದ್ದರಲ್ಲದೆ ಇವರಿಗೇ ಮಂತ್ರೋಪದೇಶ ಅನುಗ್ರಹ ಸಹ ಮೊದಲೇ ಮಾಡಿದ್ದರು. ಅಂದ ಮೇಲೆ ಇಂಥ ವ್ಯಕ್ತಿತ್ವವುಳ್ಳ ಪೀಠಾಧಿಕಾರಿಗಾಗಿ ಸಂಕೋಚಪಟ್ಟುಕೊಳ್ಳುವ ಭಾಗವೇ ಇರಲಿಲ್ಲ. ಅಂತೆಯೇ ಇವರನ್ನು ಕರೆಯಿಸಿ, ತಮ್ಮ ಅಂತ್ಯಕಾಲದಲ್ಲಿ ಬೇ ಮುದ್ರೆ; ಕಿರೀಟವನ್ನು ಇವರ ತಲೆಗೊಪ್ಪಿಸಿದರು. ಮತ್ತು ಇದಕ್ಕೂ ಮೊದಲೇ ಜಗದ್ಗುರುಗಳವರು ಯೋಚನೆ ಮಾಡಿದಂತೆ ರಂಭಾಪುರಿ ಪೀಠದ ಹಕ್ಕು ಬಾಧ್ಯತೆಗಳ ಚಾರ್ಜ ಪಟ್ಟಿಯನ್ನು ಸಿದ್ಧಗೊಳಿಸಿ, ರುಜುಮಾಡಿಯೇ ಬಿಟ್ಟಿದ್ದರು. ಇದಕ್ಕೆ ಧರ್ಮಪ್ರಭುಗಳು ಮನ್ನಿಸಿ ಒಪ್ಪಣೆಯನ್ನು ದಯಪಾಲಿಸಿಯೇ ಇದ್ದರು. ಈ ಪ್ರಕಾರ ಉಪದೇಶ ಕೊಟ್ಟು ರಂಭಾಪುರಿ ವೀರಸಿಂಹಾಸನವನ್ನು ಶ್ರೀ ಗಂಗಾಧರ ಸ್ವಾಮಿಗಳು ಶ್ರೀ ಮಜ್ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಮಹಾರಾಜೇಂದ್ರ ಎಂಬ ನಾಮದಿಂದ ಪೀಠಾಧಿಕಾರ ಸ್ವೀಕರಿಸಿ ರೇಣುಕಾವತಾರಿಗಳಾಗಿ ಉದಿಸಿ ಬಂದದ್ದನ್ನು ಸಾರ್ಥಕ್ಯಗೊಳಿಸಿ, ಪೀಠವು ಊರ್ಜಿತಾವಸ್ಥೆಯಿಂದ ಮೆರೆಯುವಂತೆ ಕಾಪಾಡಿಕೊಳ್ಳಿರಿ ಎಂದು ಹರಸಿದರು. ಗಂಗಾಧರ ಸ್ವಾಮಿಗಳು ಸಾಷ್ಟಾಂಗ ಹಾಕಿ ಉಪದೇಶ ಹೊಂದಿ ಹಕ್ಕು ಸ್ವೀಕಾರ ಮಾಡಿದರು. ಶಿವಾನಂದ ಜಗದ್ಗುರುಗಳವರು ಮಂತ್ರೋಪದೇಶ ಮಾಡಿ, ಆಶೀರ್ವದಿಸಿ ಪರಮಾತ್ಮನ ರೇಣುಕಾರಾಧ್ಯರ ನಾಮವನ್ನು ಸ್ಮರಿಸಿ, ಶಿವ ಸಾಯುಜ್ಯವನ್ನು ಹೊಂದಿದರು. ಇಂನಿಂದ ಗಂಗಾಧರ ಶಿವಾಚಾರ್ಯರು ಜಗದ್ಗುರುಗಳಾಗಿ ರಂಭಾಪುರಿ ಪೀಠ

ಶ್ರೀ ೧೦೦೮ ಶ್ರೀ ಜಗದ್ಗುರು ಶ್ರೀ ಮದ್ರಂಭಾಪುರೀ
ವೀರಸಿಂಹಾಸನಾಧೀಶ್ವರ ಪ್ರಸನ್ನ ರೇಣುಕ.

## ವೀರಗಂಗಾಧರ ಮಹಾರಾಜೇಂದ್ರ
## ಮಹಾಶಿವಾಚಾರ್ಯರು.



ರಂಭಾಪುರೀ ಪೀಠಾಧೀಶ್ವರರು.
ಬಾಳೆಹೊನ್ನೂರ.

ಅಧಿಕಾರವನ್ನು ಕ್ರಿ. ಶ. ೧೯೪೭ನೆಯ ಇಸ್ವಿ ಮೇ ತಿಂಗಳ ೨ನೆಯ ದಿನಾಂಕ
ದಂದ ಶ್ರೀ ಜಗದ್ಗುರುಗಳಾದ ಉಜ್ಜಯನಿ ಮತ್ತು ಶ್ರೀಶೈಲ ಮಹಾಸ್ವಾಮಿ
ಗಳ ಹಸ್ತದಿಂದ ಕಿರೀಟ ಧಾರಣ ಮಾಡಿಸಿಕೊಂಡು, ಪಟ್ಟಾಭಿಷೇಕ ಗೈದು,
ಸರ್ವಾಧಿಕಾರಿಗಳಾದರು ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾ
ಧರ ಮಹಾರಾಜೇಂದ್ರ ಮಹಾರಾಜಕಿ ಜೈ, ಎಂಬ ಜಯಘೋಷದೊಂದಿಗೆ
ರಂಭಾಪುರಿ ಪೀಠಕ್ಕೆ ಶೋಭಾಯಮಾನರಾಗಿ ರನ್ನಕ್ಕೆ ಚಿನ್ನದ ಕುಂದಣ
ಸೇರಿಸಿದಂತೆ ಸಿಂಹಾಸನಾರೋಹಣವಾಯಿತು ಇಲ್ಲಿಯವರೆಗೆ ಶಿವಾಚಾರ್ಯ
ರಾಗಿದ್ದವರು ಇಂದು ಜಗದ್ಗುರುಗಳಾಗಿ ಜಗದೋದ್ಧಾರಕರಾದರು.

# ಮುಕ್ತಿಮಂದಿರದ ಗುರುಕುಲದ ವಾರ್ಷಿಕೋತ್ಸವ

ಗಂಗಾಧರ ಸ್ವಾಮಿಗಳು ರಂಭಾಪುರಿಯ ಪೀಠದ ಒಡೆಯರಾದ್ದರಿಂದ ಮುಕ್ತಿ ಮಂದಿರದ ಗುರುಕುಲಕ್ಕೆ ವಾರ್ಷಿಕೋತ್ಸವಕ್ಕೆ ಬರಲಿಕ್ಕಾಗಲಿಲ್ಲ. ತನ್ಮೂಲಕ ಶ್ರೀಗಳವರು ಶ್ರೀ ಷ. ಬ್ರ. ಬಾಲ ತಪಸ್ವಿಗಳಾದ ಚೆನ್ನವೀರೇಶ್ವರ ಶಿವಾಚಾರ್ಯರು ಹೋಟಗಿ (ಸೊಲ್ಲಾಪೂರ) ಇವರ ನೇತೃತ್ವದಲ್ಲಿ ಉತ್ಸವ ಕಾರ್ಯವು ಸಾಂಗವಾಯಿತು ಮುಕ್ತಿ ಮಂದಿರದ ಸುತ್ತು ಮುತ್ತಲಿನ ಹಳ್ಳಿ ಪುರಗಳ ಭಕ್ತರ ಹಂಸಿಯು ಕೂಡಿತ್ತು. ಇಲ್ಲಿ ನೆರೆದ ಮಹೋತ್ಸವ ಕಾರ್ಯ ಕ್ರಮದಲ್ಲಿ ಸಭಾ ಸ್ಥಾನವನ್ನು ಅಲಂಕರಿಸಿದ್ದ ಹೋಟಗಿ ಸ್ವಾಮಿಜಿಯವರು ನೆರೆದ ಭಕ್ತ ಸಂದಣಿಗೆ ತಕ್ಕ ಉಪದೇಶಪರ ಉಪನ್ಯಾಸವನು ಮಾಡಿದರು ಅದೆಂತೆನೆ—

ತಪೋವನ ಶ್ರೀ ಮುಕ್ತಿ ಮಂದಿರ ಗುರುಕುಲ ಕ್ಷೇತ್ರವಂಸಂದರ್ಶಿಸುವ ಭಕ್ತಾದಿಗಳೆ:— ಮನುಷ್ಯನಿಗೆ ಶಾಂತಿ ಸದ್ಗತಿಗಳು ಸಾಧನೀಯಗಳಾಗವೆ. ಇಹಲೋಕದ ಭಾಗ್ಯ ಭೋಗಕ್ಕೆ ಕೇವಲ ಶರೀರ ಸುಖವೇ ಗುರಿಯಲ್ಲ. ತಾಪತ್ರಯದಿಂದ ಬಳಲುವವರಿಗೆ ಶಾಂತಿಯಿಲ್ಲ ಅಶಾಂತ ಸ್ವಭಾವನಲ್ಲಿ ಎಲ್ಲ ಬಗೆಯ ಕೊರತೆಗಳು ತುಂಬಿ ತುಳುಕುತ್ತಿರುತ್ತವೆ. ಕೊರತೆಗಳಿಗೀಡಾ

ದವನಿಗೆ ಸುಖವಿಲ್ಲ. ಕೊರತೆಗಳಿಗೆ ದಾರಿದ್ರವೇ ಮೂಲವಾಗಿದೆ. 'ದಾರಿದ್ರ ತನವು ಪಾಪ ಪ್ರಭಾವದಿಂದುಂಟಾಗುತ್ತದೆ. ಪಾಪ-ತಾಪಗಳಿಂದ ಪೀಡಿತ ನಾದವನಿಗೆ ಸದ್ಗತಿಯೆಂದಿಗೂ ದೊರೆಯುವದಿಲ್ಲ, ಶಾಂತಿ ದೊರೆಯಬೇಕಾದರೆ. ತಾಪತ್ರಯವು ಪ್ರಬಲವಾಗಿರುವಾಗ ಶಾಂತಿಯ ಸುಳಿವೆ ಉಳಿಯದು. ದುರಿಚ್ಛಾ ದುಃಸಂಕಲ್ಪ ಪ್ರಭಾವದಿಂದ ನರಳುವವನಿಗೆ ಸುಖದ ಲೇಶವೂ ದೊರೆಯದು, ಇಂಥ ನಿಸ್ಸಾರ ಹೃದಯನು ಸದ್ಗತಿಯನ್ನು ಬಯಸುವದು, ಒನಿಕೆಯನ್ನು ತಲೆಗೆ ಸುತ್ತಲೆಳಿಸಿದಂತೆಯೇ ಸರಿ

ಲೋಕದಲ್ಲಿ ಶಾಂತಿ ಸದ್ಗತಿಯನ್ನು ಅಪೇಕ್ಷಿಸದವರು ಅತಿ ವಿರಳರು. ಶಾಂತಿ-ಸುಖ-ಸದ್ಗತಿಗಳಿಗೆ ತಕ್ಕ ಶಾಸ್ತ್ರೀಯ ಉಪಾಯಗಳನ್ನು ಕೈಕೊಳ್ಳಬೇಕು. ಆರೋಗ್ಯವನ್ನು ನೆನೆಸಿಕೊಂಡರೆ ರೋಗವು ನಷ್ಟವಾಗುವದಿಲ್ಲ. ಆರೋಗ್ಯ ಪ್ರಾಪ್ತಿಗೆ ಪಥ್ಯಾಹಾರ, ಶುದ್ಧೌಷಧಗಳ ಸೇವನೆಯು ಅವಶ್ಯಕವಾದಂತೆ ಸುಖ-ಸದ್ಗತಿಗಳ ಪ್ರಾಪ್ತಿಗೆ ಶಾಸ್ತ್ರೋಕ್ತ ವಿಧಾನಗಳೇ ಬೇಕು. ಔಷಧಿ-ವೈದ್ಯರ- ನಾಮೋಚ್ಚಾರ ಸ್ಮರಣಗಳಿಂದ ರೋಗ ನಿವೃತ್ತಿಯಾಗುವದಿಲ್ಲ. ಶಾಸ್ತ್ರ ವಿರುದ್ಧಾಚರಣೆಗಳಿಂದ ವಿರುದ್ಧ ಫಲಗಳಾದ ಅಶಾಂತಿ ದುಃಖ ದುರ್ಗತಿಗಳೇ ದೊರೆಯುವವು. ಈ ತತ್ವನನ್ನರಿತು ನಡೆದರೆ, ಮನುಷ್ಯನು ತನ್ನ ಜೀವನ ಗುರಿಯನ್ನು ಸಾಧಿಸುವದರಲ್ಲಿ, ತಿಲಮಾತ್ರವೂ ಸಂದೇಹವಿಲ್ಲ.

ಈ ವಿದ್ಯೆ ಪ್ರಚಾರದ ನವಯುಗದಲ್ಲಿ ಸುಖ-ಶಾಂತಿಗಳು ಅಗ್ಗಗಳಾಗ ಬೇಕಾಗಿತ್ತು. ಆದರೆ ಇದು ವಿಪರೀತವಾಗಿ ಸುಖ ಶಾಂತಿಗಳು ದೂರದೂರ ಸರಿಯುತ್ತ, ಕಂಡಂತಾಗಿ ಕೈಗೆ ಸಿಗದ ಬಿಸಿಲ್ಗುದುರೆಯಾಗಿವೆ. ವಿದ್ಯಾ ಪ್ರಚಾರ ಸಂಪಾದನೆಗೆ ಕೋಪ-ತಾಪಾದಿಗಳೇ ಫಲಗಳಾಗ ಹತ್ತಿವೆ. ಮನುಷ್ಯನು ತನ್ನ ಪ್ರಯತ್ನಗಳಲ್ಲಿಯ ಲೋಪ- ದೋಷಗಳನ್ನು ತಿಳಿಯದೆ ಹೋದರೆ, ಅವನಿಗೆ ಸತ್ಯಸಿದ್ಧಿಯೆಲ್ಲಿ ? ದುಃಸಂಕಲ್ಪ-ದುರಾಚಾರಗಳಿಂದ-ದುಃಖ ದುರ್ದೆಶೆಗೀಡಾದವನು ಬಲವಿಲ್ಲದ ಬಾಹ್ಯಾಡಂಬರದ ಶುಷ್ಕ ಸುಧಾರಣೆಯಲ್ಲಿ ಕೈಯಿಟ್ಟು ನೋಡುವದು, ಸತ್ಯ ಸಂಕಲ್ಪ ಶೂನ್ಯವಾದ ಧರ್ಮಾಚರಣೆಯಿಲ್ಲದ ಸತ್ಯ ರಹಿತವಾದ ಗುಣದೋಷ ಪರಿಜ್ಞಾನವಿಲ್ಲದ ನಿಸ್ಸಾರ ಸುಧಾರಣೆಯ ಕೂಗಾಟದಿಂದ ಶ್ರಮವು ಮಾತ್ರ ಕೈಗಂಟಾಗುವದು. ಇಂತಹ

ಇಷ್ಟಪಟ್ಟ-ಬಿಕ್ಕಟ್ಟುಗಳಲ್ಲಿ ಎಲ್ಲಿ ಹೋಗಬೇಕು ಯಾರನ್ನಾಶ್ರಯಿಸಬೇಕು
ಎಂದು ದಿಗ್ಭ್ರಾಂತರಾದ ಸ್ತ್ರೀ-ಪುರುಷ ಮನುಷ್ಯ ಪ್ರಪಂಚಕ್ಕೆ ರಕ್ಷಣ ಸ್ಥಾನ
ಗಳು ಬೇಕಲ್ಲವೆ ? ಮಹಾತ್ಮರು ಪರದುಃಖ ನಿವಾರಣಕ್ಕಾಗಿ ಪರಹಿತ ಪರ
ಮಾತ್ಮಾರಾಧನೆಗಳನ್ನೇ ಜೀವನದ ಫಲಗಳನ್ನಾಗಿ ನೆರೆಸಂಬಿರುತ್ತಾರೆ ಪರಮ
ತಪೋನಿಧಿಗಳೂ ವೀರವೈರಾಗ್ಯ ಮೂರ್ತಿಗಳೂ, ಭೀಷ್ಮಬ್ರಹ್ಮಚಾರಿಗಳೂ,
ಆದ ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಶಿವಾಚಾರ್ಯರು
ಜನೋದ್ಧಾರದ ಕಾರ್ಯದಲ್ಲಿ ಜನಜೀವನದ ಗುರಿಗಳಾದ ಸುಖ-ಶಾಂತಿ-
ಸದ್ಗತಿಗಳ ಪ್ರಾಪ್ತಿಗಾಗಿ ಮುಕ್ತಿಮಂದಿರ ಗುರುಕುಲ ಕ್ಷೇತ್ರವೆಂಬ ಈ
ಪವಿತ್ರಾಶ್ರಮವನ್ನು ರೂಪಗೊಳಿಸಿ ಪುರಾಣ-ಪ್ರವಚನೋಪನ್ಯಾಸ-ತಪೋ
ನುಷ್ಠಾನಗಳಿಂದ ಲೋಕ ಕಲ್ಯಾಣವನ್ನು ಅಚರಿಸುತ್ತಿರುವ ಜಗದ್ಗುರುಗಳ
ದೃಢಮನೋಭಾವವನ್ನರಿತ ಅನೇಕ ಮಾನವ ಮಣಿಗಳು ಶ್ರೀಗಳ ಧರ್ಮ
ರಕ್ಷಣಾಲಯದ ಮುಕ್ತಿಮಂದಿರದ ಸರ್ವ ವಿಧದಿಂದಲೂ ಉದಾರ ಹೃದಯ
ದಿಂದಲೂ ಹೆಚ್ಚಾದ ಸಹಾಯ ಸೌಕರ್ಯಗಳು ದೊರೆಯಬೇಕು. ತನ್ನ
ಹೆಸರಿನಂತೆ ಮುಕ್ತಿಮಂದಿರವು ತಪೋವನವಾಗಿಯೂ ಗುರುಕುಲವಾಗಿಯೂ
ಕ್ಷೇತ್ರವಾಗಿಯೂ ಪರಿಣಮಿಸಿದೆ. ಮಹಾತ್ಮರ ನಿವಾಸ ಸ್ಥಾನಗಳೇ ಈ
ಹೆಸರಿಗೆ ತಕ್ಕುವಾಗಿವೆ.

ಮುಕ್ತಿ ಮಂದಿರ ದರ್ಶನ, ವಾಸ, ಶ್ರವಣ, ಸ್ಮರಣಗಳಿಂದ ಸಮಸ್ತ
ರಿಗೂ ಶುಭ ವಾಸನೆ ಸತ್ಕರ್ಮ ಪ್ರವೃತ್ತಿಯುಂಟಾಗುವದು. ಈ ಪವಿತ್ರ
ಕ್ಷೇತ್ರವನ್ನು ವಿದ್ಯಾರ್ಣಿಯನ್ನು ಮಾಡಬೇಕೆಂಬುದೇ ಶ್ರೀಗಳವರ ಹಬ್ಬ
ಯಕೆಯಾಗಿದೆ. ಇದು ಜಗದ್ಗುರುಗಳ ಸ್ವಭಾವವಾಗಿದೆ ಇದಕ್ಕೋಸ್ಕರ
ಶ್ರೀಗಳವರು ತಮ್ಮ ಶರೀರ ಶಕ್ತಿಯನ್ನು ತಪೋಬಲವನ್ನು ಮುಕ್ತಿಮಂದಿರ
ದಲ್ಲಿ ಕೇಂದ್ರೀಕರಿಸಿದ್ದು ಇದು ಅಲ್ಪ ಕಾರ್ಯವಲ್ಲ ಶಿವಾನುಗ್ರಹದಿಂದ ಗುರು
ಕೃಪೆಯಿಂದ ನೆರವೇರಿಸಬೇಕಾದ ಕಾರ್ಯವನ್ನು ನೆರವೇರಿಸಿ ದಿವ್ಯ ತ್ಯಾಗ
ಶಕ್ತಿಯೊಡನೆ ಸುಖ-ಶಾಂತಿ, ಸದ್ಗತಿಗಳ ಸನ್ಮಾರ್ಗವು ದೊರೆಯುವದು.
ಸತ್ಯವೆಂದು ನಂಬುಗೆ ಈ ಬಗೆಯು ಈಡೇರಿ ಸದ್ಧರ್ಮ ಫಲಿಸಿ ಮಾನವ
ಜೀವನವು ಸುಖ, ಶಾಂತಿಗಳ ಬೀಡಾಗಿ, ಪ್ರಸನ್ನ ರೇಣುಕಾರಾಧ್ಯರ ಕೃಪಾ

ಶೀರ್ವಾದವು ಎಲ್ಲರಿಗೂ ದೊರೆತು ಕೃತಾರ್ಥರಾಗುವಾ ! ಮುಂತಾಗಿ ಉಪದೇಶಪರ ಉಪನ್ಯಾಸ ಮಾಡಿದರು ಹಲವು ಭಜನಾ ಸಂಘಗಳು ಕೂಡಿದ್ದವು ರೇಣುಕ ಗೀತಾ ಸ್ವರಗಳು ಕರ್ಣ ಮಧುರವಾಗಿ ಕೇಳಿಸುತ್ತಿದ್ದವು. ನಾಟ್ಯ ಸಂಘದವರು ಬಂದಿದ್ದರು ರೇಣುಕಾವತಾರದ ನಾಟಕಗಳನ್ನು ಅಭಿನಯಿಸಿದರು ಜನಾನಂದಗೊಳಿಸಿದರು. ತಮ್ಮಲ್ಲಿದ್ದ ಕಲಾ ಪ್ರೇಮವನ್ನು ವ್ಯಕ್ತಗೊಳಿಸಿದರು.

ಅಂತು ಈ ಗುರುಕುಲವು, ತಪೋವನವು, ಪ್ರಶಾಂತ ಪ್ರದೇಶವು ಮುಕ್ತಿಗೆ ಮಂದಿರವಾದಂಥಹದು. ಮುಕ್ತಿ ಮಂದಿರವು ಪರಿಶೋಭಿಸ ತೊಡಗಿದೆ. ಇಲ್ಲಿ ಈಗ ಪಾಠಶಾಲೆಯಿದ್ದು ಶ್ರೀ ಗಂಗಾಧರ ಶಾಸ್ತ್ರಿಗಳೆಂಬ ಪಂಡಿತರು ಪಾಠ, ಪ್ರವಚನವನು ನಡೆಯಿಸಿಕೊಂಡು ಆಶ್ರಮದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಲಿದ್ದಾರೆ ಹೀಗೆ ಮುಕ್ತಿ ಮಂದಿರವು ತನ್ನ ವೈಶಾಲತೆಯನ್ನು ತೋರ್ಪಡಿಸುತ್ತಿದೆ. ಗುರು ಕಾಲದಲ್ಲಿ ನಮ್ಮ ಜನತೆಯು ಧರ್ಮವಂತರೂ ವಿದ್ಯಾವಂತರೂ ನವನಾಗರಿಕತೆಯ ಮೇಲ್ಮಟ್ಟವನ್ನು ಮುಟ್ಟುವ ಸುಶಿಕ್ಷಿತರೂ ಆಗಿ ಬಾಳಲು ಈ ಮುಕ್ತಿ ಮಂದಿರವು ಸಹಾಯಕಾರಿಯಾಗುವಂತೆ ಮಾರ್ಪಡಿಸಿಕೊಂಡು ಧನ್ಯರಾಗುವಾ !

## ಎಡೆಯೂರಲ್ಲಿ (ಪ್ರಥಮ) ದಸರಾ ಮಹೋತ್ಸವ ! (೧೯೪೭)

ಗಂಗಾಧರ ಸ್ವಾಮಿಗಳು ಅಹುದು ಜಗದ್ಗುರುಗಳಾದ ಪ್ರಸನ್ನ ರೇಣುಕರು ತಮ್ಮ ಸರ್ಕೀಟು ಸಿಬ್ಬಂದಿಯೊಂದಿಗೆ ಮೈಸೂರನಾಡಿನಲ್ಲಿ ಭಕ್ತರನ್ನು ಆಶೀರ್ವಧಿಸುವದಕ್ಕೋಸ್ಕರ ಸಂಚಾರಕಾರ್ಯ ಕೈಕೊಂಡು ಎಡೆಯೂರ ಶಾಖಾ ಮಠದಲ್ಲಿ ಬಿಡಾರಮಾಡಿಬಿಟ್ಟು ಮೊದಲನೆಯಸಾರಿ ದಸರಾ ಮಹೋತ್ಸವವನ್ನು ಒಳ್ಳೇ ವಿಜೃಂಭಣೆಯಿಂದ ಹಿರಿದಾದ ಹಿಂದಿನ ರೀತಿಯಿಂದಲೇ ನೆರವೇರಿಸಿದರು. ಮುಂದೆ ಇವರು ಸಂಚಾರಮಾಡುತ್ತ ಕುಪ್ಪೂರ ಗದ್ದಿಗೆ ಮಠಕ್ಕೆ ಪಯಣಗೈದು ಅನುಷ್ಠಾನ ಸಹಸ್ರಬಿಲ್ವಾರ್ಚನೆ, ಮಹಾಪೂಜಾಕೈ

ಕೊಂಡು -ಕೂಡಿದ ಭಕ್ತರಿಗೆ ಉಪನ್ಯಾಸ ಪ್ರವಚನವನು ಹೇಳುತ್ತಿರಲಾಗಿ ಒಂದು ಮಹಾ ವಿಸ್ಮಯ ಪ್ರಸಂಗವ ಸನ್ನಿವೇಶವು ಒದಗಿತ್ತೆಂದು ಹೇಳುತ್ತಾರೆ!

ಒಬ್ಬ ಹೆಣ್ಣುಮಗಳು ಬಾವಿಬಿದ್ದು ಕಲ್ಲುಪಡೆಯೊಳಗೆ ಸಿಕ್ಕಿಕೊಂಡಿದ್ದಳಂತೆ, ನೀರಿನಲ್ಲೀದು ಶೋಧಿಸುವವರಿಗೆ ಬಹಳ ಪ್ರಯಾಸವಾಗಿ ಕೊನೆಗೆ ಕಲ್ಲುಪಡೆಯಲ್ಲಿ ಸಿಕ್ಕ ಹೆಂಗಸಿನ ಶವವ ಸ್ವರೂಪವನ್ನು ನೀರಿನಿಂದ ಹೊರಗೆ ತೆಗೆದುಹಾಕಿದಮೇಲೆ ದೇಹದೊಳಗೆ ಸೇರಿದ್ದ ನೀರನ್ನೆಲ್ಲ ಹೊರಗೆ ಹಾಕಿ ಕೃತಿಮ ಶ್ವಾಸೋಚ್ಛ್ವಾಸ ಮಾಡಲಾರಂಭಿಸಿದರೂ ಆಸ್ತ್ರೀಯಳಿಗೆ ಸ್ಮೃತಿ ಬರಲೇ ಇಲ್ಲ! ಕೂಡಲೇ ಈ ಸುದ್ದಿ ಜಗದ್ಗುರುಗಳಿಗೆ ತಿಳಿಯಲಾಗಿ ಭಸ್ಮವನ್ನೂ - ಕರುಣಪ್ರಸಾದವನ್ನೂ - ಕೊಟ್ಟು ಕಳುಹಿ ಅವಳ ಮೈತುಂಬ ಭಸ್ಮಧಾರಣಮಾಡಿ, ಪ್ರಸಾದ ಸೇವನೆ ಗೈಸಲು -ಅವಳ ಹೋದ ಜೀವ ಮರಳಿತು. ಆಹೆಣ್ಣುಮಗಳು ಎಚ್ಚತ್ತು ತಮ್ಮ ಜನರನ್ನು ಕೂಡಿಕೊಂಡಳು. ಗುರುಗಳ ಆಶೀರ್ವಾದ ಹಾಗು ಕುಪ್ಪೂರ ಗದ್ದುಗೆಯ ಸ್ಥಾನ ಮಹಿಮೆಯಿಂದ ಜೀವದಾನ ಪಡಕೊಂಡು ಸಂರಕ್ಷಿತವಾಗಿ, ತನ್ನ ಸ್ಥಳಕ್ಕೆ ತೆರಳಿದಳು. ಇವೆಲ್ಲ ಆ ರೇಣುಕರ ತಪಃಪ್ರಭಾವ-ತೇಜಸ್ಸು ಓಜಸ್ಸು-ದೇವ ತ್ವಸ್ವರೂಪವಲ್ಲದೆ ಮತ್ತೇನು? ಕುಪ್ಪೂರ ಗದ್ದುಗೆ ವ ಠದಿಂದ ಶ್ರೀಗಳವರು ತಿಪಟೂರಿಗೆ ಪ್ರಯಾಣ ಬೆಳಸಿದರು!

## ತಿಪಟೂರಲ್ಲಿ [ದ್ವಿತೀಯ] ದಸರಾ ಮಹೋತ್ಸವ (೧೯೬೮)

ಮನುಷ್ಯನ ಇಹಪರ ಸುಖಗಳಿಗೆ ಧರ್ಮಬೋಧ ಧರ್ಮಾಚರಣೆಗಳು ಸಾಧನಗಳಾಗಿವೆ, ಐಹಿಕಪಾರಮಾರ್ಥಿಕ ಕರ್ಮಸೂತ್ರಗಳು ಶ್ರೀಗುರುವಿನಾ ದೀನಗಳಾಗಿವೆ. ಸದ್ಗುರು ಶಾಸನ ಇಲ್ಲದೆ ಕರ್ಮ ಜ್ಞಾನಗಳ ಮಾರ್ಗವು ದೊರೆಯಲಾರದು, ಆದುದರಿಂದಲೇ ಸದ್ಗುರುವು ಶ್ರೇಷ್ಠನಾಗಿರುವನು ಸದ್ಗುರುಗಳ ಸಂಚಾರದಿಂದ ಸದ್ಧರ್ಮ ಬೋಧೆಯಾಗಿ ಸುಜ್ಞಾನ ಪ್ರಕಾಶವು

ಜರಿಡಿ ಜನ ಜೀವನದಲ್ಲಿ ನೂತನ ಚೈತನ್ಯ ಉಂಟಾಗುವದು. ಶಾಸ್ತ್ರಾನು ಭವ ಲೋಕ ಪ್ರಸಿದ್ಧವಾದ ಸಂಗತಿಯಾಗಿದೆ. ಪರಮ ತಪೋಸಿಧಿಗಳೂ ವೀರ ವೈರಾಗ್ಯ ಮೂರ್ತಿಗಳೂ, ನಿರ್ಮಲ ಕೀರ್ತಿಗಳೂ, ಶಿಷ್ಯೋದ್ಧಾರ ಧುರೀಣರೂ, ಸದ್ಧರ್ಮ ಪಾರಾಯಣರೂ ಆದ ಶ್ರೀ ರಂಭಾಪುರಿ ಜಗದ್ಗುರು ಗಳವರು ಜಗತ್ಕಲ್ಯಾಣಾರ್ಥವಾಗಿ ಲೋಕ ಮಧ್ಯದಲ್ಲಿ ಸಂಚರಿಸುತ್ತಿರುವದು ಸರಿಯಷ್ಟೆ; ಆತ್ಮೋದ್ಧಾರಾಪೇಕ್ಷಿಗಳಾದ ಶಿಷ್ಯ ಮಂಡಳಿಯವರು ನಾ ಮುಂದೆ ತಾ ಮುಂದ ಎಂದು ಕುತೂಹಲದಿಂದ ಶ್ರೀ ಮಹಾ ಸನ್ನಿಧಾನ ವನ್ನು ಮಹೋತ್ಸವ ಪೂರ್ವಕವಾಗಿ ದಯ ಮಾಡಿಸಿಕೊಂಡು ಶ್ರದ್ಧಾ ಭಕ್ತಿ ಪೂರ್ವಕವಾಗಿ ಸೇವಾದಿಗಳನ್ನು ಸಲ್ಲಿಸಿ, ಧನ್ಯರಾಗುತ್ತಿರುವದು. ಸನ್ನಿಧಾನ ದರ್ಶ, ಪೂಜಾ ವೈಭವ, ಮೃದು ಮಧುರವಾದ ಹಿತೋಪದೇಶ ನಿತ್ಯ ನೈಮಿತ್ತಿಕ ಶಿವ ಮಹಾ ವ್ರತಾಚರಣೆ ಮುಂತಾದವುಗಳಿಂದ ಶಿಷ್ಯಶ್ರೇಣಿಯು ಆನಂದ ಸಾಗರದಲ್ಲಿ ಲೋಲಾಡುತ್ತದೆ.

ಶ್ರೀ ಮಹಾ ಗುರುಗಳವರ ದರ್ಶನಾಶೀರ್ವಾದಗಳಿಗೆ ಪಾತ್ರರಾಗುವ ವರೇ ಧನ್ಯರು. ಶ್ರೀ ಮಹಾ ಸವಾರಿಯು ದಯ ಮಾಡಿಸಿದ ಗ್ರಾಮವೇ ಪವಿತ್ರವು. ಇಂತಹ ಸುಮಂಗಲವಾದ ಅಮೃತ ಸಿದ್ಧಿಯೋಗವನ್ನು ತಿಪ ಟೂರಪುರ ನಿವಾಸಿಗಳು ಮಹಾ ಸನ್ನಿಧಿಯವರನ್ನು ಪಲ್ಲಕ್ಕಿ ಮಹೋತ್ಸವ ಪೂರ್ವಕವಾಗಿ ಬಿಜಯಂಗೈಸಿ ಶುಭಾಶೀರ್ವಾದಗಳಿಗೆ ಪಾತ್ರರಾದರಲ್ಲದೆ ದಸರಾ ಮಹೋತ್ಸವವನ್ನು ಕೂಡಾ ನೆರವೇರಿಸಿದರು.

ಬಾಹ್ಯ ಸಂಸ್ಕೃತಿಯು ಬೆಳೆಯುತ್ತ ಹೋದರೆ ಜ್ಞಾನ ನಿಧಿಯು ಬೆಳೆಯ ಹತ್ತುವದು. ಇದಕ್ಕಾಗಿಯೇ ಶಿಕ್ಷಣವು ಬೇಕಾಗಿರುವದು ಸಾಹಿ ತ್ಯದ ಆವಶ್ಯಕತೆಯುಂಟು. ಸಾಹಿತ್ಯ ಗರ್ಭದಲ್ಲಿ ಸಕಲ ಕಲೆಗಳೂ ಇರ ತಕ್ಕವುಗಳಾಗಿವೆ. ನಾಡಿನ ಏಳಿಗೆಗೆ ಬೇಕಾದ ಸಮಸ್ತಕಲೆಗಳೂ ಬೆಳೆಯ ಬೇಕಾಗಿದೆ ಶಿಕ್ಷಣ ಕಾರ್ಯವು ಕ್ರಮೇಣ ಅಭಿವೃದ್ಧಿಗೊಳ್ಳುತ್ತಾ ಪ್ರಪಂಚದ ಬಹು ಭಾಗವನ್ನು ನಾನಾ ರೀತಿಯಾಗಿ ಆವರಿಸಿಕೊಂಡು ಮುಂದುವರಿ ಯುತ್ತಲಿದೆ. ಶಿಕ್ಷಣೋಪಾಯವೊಂದಲ್ಲದೆ ಸನಾತನ ಕಾಲದಿಂದಲೂ ದೇಶ

ಕಾಲಾನುಸಾರವಾಗಿ ಅನೇಕ ವಿಶೇಷ ದಿನಗಳು ಆಚರಿಸುತ್ತ ಬರುತ್ತಲಿವೆ. ಇವುಗಳನ್ನು ಹಬ್ಬ (ಆನಂದದ ದಿನ) ಗಳೆಂದು ಕರೆಯುತ್ತಾರೆ. ಆಯಾಯ ದೇಶಿಯ ಆಯಾಯ ಮತೀಯರು ತಮ್ಮ ತಮ್ಮ ದೇಶ ಮತಾದಿಗಳ ಅಭಿವೃದ್ಧಿಗಾಗಿ ಈ ದಿನಗಳನ್ನು ಆಚರಿಸಿ ಆನಂದಿಸುವರು. ಈ ದಿನಗಳಲ್ಲಿ ರಾಷ್ಟ್ರೋನ್ನತಿಯ ಸಾಧನಗಳಾದ ಅನೇಕ ವಿಷಯಗಳನ್ನು ಪ್ರಚಾರ್ಕ್ಕೆ ಮಾಡುವರು.

ಭಾರತವು ಹಿರಿದಾದನಾಡು! ವಿಶಾಲವಾದದೇಶವು! ಸಮೃದ್ಧವಾದ ರಾಷ್ಟ್ರವು! ಧರ್ಮನಗೂಡು! ಸಜ್ಜನ ಕಲಾಕೋವಿದರಬೀಡು! ಭರತಖಂಡದಲ್ಲಿಯೂ, ಅನೇಕ ಹಬ್ಬಗಳು (ಆನಂದೋತ್ಸವಗಳು) ಆಚರಣೆಯಲ್ಲಿವೆ. ಅವುಗಳ ಲೌಕಿಕ-ಪಾರಮಾರ್ಥಿಕರೂಪದಿಂದ ಭಿನ್ನಭಿನ್ನಗಳಾಗಿದ್ದರೂ, ಅವೆಲ್ಲ ನಾಡಿನ ಅಂದರೆ ನಾಡಿನಲ್ಲಿರುವವರ ಸರ್ವವಿಧಮಹೋನ್ನತಿಯನ್ನೇ ಸಾಧಿಸತಕ್ಕವುಗಳಾಗಿವೆ. ಭಾರತೀಯರ ಅನೇಕ ವ್ರತಗಳಲ್ಲಿ ನವರಾತ್ರಿ (ದಸರಾ) ಮಹೋತ್ಸವವು ಒಂದು ಪ್ರಧಾನವಾದ ವ್ರತವಾಗಿದೆ. ಇದೊಂದು ಜಗತ್ಕಲ್ಯಾಣದ ಸ್ಮಾರಕವ್ರತವಾಗಿದೆ, ಬಹುಮಟ್ಟಿಗೆ ಎಲ್ಲ ಹಬ್ಬಗಳು ಸ್ಮಾರಕ ದಿನಗಳೇ ಆಗಿವೆ ನವರಾತ್ರಿ ವ್ರತವು, ಭರತಖಂಡದಲ್ಲಿ ಮಹಾವೈಭವದಿಂದ ನೆರವೇರುತ್ತಬಂದಿದೆ. ನವರಾತ್ರಿ ದಿನಗಳಲ್ಲಿ ರಾಜ. ಗುರುಮಂದಿರಗಳಲ್ಲಿ ನಾನಾವಿಧಗಳಾದ ಭಗವತ್ಪೂಜಾದಿಗಳೂ-ಜನಮನೋರಂಜಕಗಳೂ ಕಲಾವಿಸ್ತಾರ ಕಾರಣಗಳೂ ಆದ ಅನೇಕ ಕಾರ್ಯಗಳು ಈಗಲೂ ನಡೆಯುತ್ತವೆ. ಧರ್ಮರಾಜ್ಯವೆಂದು ಕೀರ್ತಿವೆತ್ತ ಕನ್ನಡರಾಜರು ನಡೆಯಿಸುತ್ತ ಬಂದ, ದಸರಾಮಹೋತ್ಸವವು-ನಾಡಹಬ್ಬವು ಭರತಖಂಡದಲ್ಲಷ್ಟೇ ಅಲ್ಲ ಪ್ರಪಂಚದಲ್ಲಿಯೇ ವಿಖ್ಯಾತವಾಗಿದೆ. ಎಂದರೆ ಅತಿಶಯೋಕ್ತಿಯಲ್ಲ, ಅರಮನೆ ಗುರುಮನೆಗಳೆರಡೂ ದೇಶೋನ್ನತಿಯ ಕೇಂದ್ರಸ್ಥಾನಗಳಾಗಿರುವವು. ಪ್ರಜಾರಂಜನೆಯು ರಾಜರ ಗುರಿಯಾಗಿದ್ದರೆ, ಶಿಷ್ಯೋದ್ಧಾರವೇ ಗುರುಗಳ ಲಕ್ಷ್ಯವಾಗಿದೆ. ರಾಜರ ಪ್ರಜರೇ ಗುರುಗಳಶಿಷ್ಯರು:- ಗುರುಗಳ ಶಿಷ್ಯರೇ ರಾಜರ ಪ್ರಜರು;

ಶ್ರೀ ಮದ್ರಂಭಾಪುರಿ, ವೀರ ಸಿಂಹಾಸನಾಧೀಶ್ವರ ಶಿವೈಕ್ಯ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು, ಮಹಾಪೀಠದಲ್ಲಿ ಪ್ರಾಚೀನಕಾಲದಿಂದಲೂ ಪದ್ಧತಿಯಂತೆ ನಡೆದುಬರುತ್ತಿದ್ದ, ದಸರಾಮಹೋತ್ಸವವನ್ನು ತಮ್ಮ ಕಾಲದಲ್ಲಿ ಮಹಾವೈಭವದೊಡನೆ ನೆರವೇರಿಸುತ್ತ ಪಂಡಿತ ಶ್ರೇಣಿಗೆ ಸದಾಶ್ರಯವನಿತ್ತು ಕೀರ್ತಿಶೇಷರಾದರು. ಅವರ ಅನುಗ್ರಹಾಶೀರ್ವಾದಗಳಿಗೆ ಪಾತ್ರರಾದ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು, ದೇಶಮಧ್ಯೆದಲ್ಲಿ ಸಂಚರಿಸುತ್ತ, ನಿತ್ಯ ನೈಮಿತ್ತಿಕ ಮಹಾವ್ರತಾಚರಣಾದಿ ಸತ್ಕಾರ್ಯಗಳಿಂದ ಸಮಸ್ತ ಜನತೆಯನ್ನು ಜಾಗೃತಳಿಗೊಸುತ್ತಿರುವರು. ಸರ್ವಾನುಭೂತವಿಷಯವಾಗಿವೆ ಮಹಾ ಶ್ರೀಗಳವರ ೧೮೬೯ ನೆಯ ಸರ್ವಜಿತನಾಮ ಸಂವತ್ಸರದ ದಸರಾ ಮಹೋತ್ಸವವು ಶ್ರೀ ಮಹಾ ಸಂಸ್ಥಾನದ ಖಾಸಾಮಠವಾದ ಎಡೆಯೂರ ಮಠದಲ್ಲಿ ಆ ಭಾಗ ನಿವಾಸಿಗಳಿಂದ ಸಕಲ ಜನರ ಸಭಕ್ತಿ ಸೇವಾ ಸಹಾಯದಲ್ಲಿ ಮಹಾ ವೈಭವದೊಡನೆ ನೆರವೇರಿದ ಸಂಗತಿಯು ವಿಖ್ಯಾತವಾದುದಾಗಿದೆ.

ಈ ಸಲ ಪ್ರಾಪ್ತವಾದ ೧೮೭೦ ನೆಯ ಸರ್ವಧಾರಿಸಂವತ್ಸರದ ದಸರಾ ಮಹೋತ್ಸವವು ತಿಪಟೂರಲ್ಲಿ ನೆರವೇರಿತು. ಸರ್ವರೂ ಗುರು ಕೃಪೆಗೆ ಪಾತ್ರರಾಗಿ ಧನ್ಯರಾದರು. ಕಾರ್ಯಕ್ರಮಗಳಾದ ಶ್ರೀ ಜಗದ್ಗುರುಗಳವರ ನಿತ್ಯ ಪೂಜಾನುಷ್ಠಾನ ಮತ್ತು ವೇದಾಗಮ ಉಪನಿಷತ್ ಗೀತಾದಿ ಪಾರಾಯಣ ಗಜಾಶ್ವಾದಿ ಚತುರಂಗ ಬಲದೊಡನೆ ಅಗ್ರೋದಕವನ್ನು ತರುವದು. ಸರಸ್ವತಿ ಪೂಜಾದಿಗಳು ದರಬಾರ ಕಾರ್ಯಕ್ರಮಗಳು; ನವರಾತ್ರಿಯಲ್ಲಿ ಶ್ರೀ ಜಗದ್ಗುರುಗಳವರ ಸಿಂಹಾಸನಾರೋಹಣ ವೇದಘೋಷ ಪಂಡಿತರ ಭಾಷಣ ಕೀರ್ತನಗಳು ಕಲಾವಿದರ ಕಲಾ ಪ್ರದರ್ಶನ-ಸಂಗೀತ ಪ್ರಸಂಗ ಭಜನಾ ಸಂಘದವರ ಮೇಳಗೀತೆಗಳು ಮಹಾ ಸಂಸ್ಥಾನದ ಸಿಬ್ಬಂದಿ ಜನರ ನಜರ ಮುಜರೆಗಳು. ಮಹಾ ಮಂಗಳಾರತಿ, ಪುಷ್ಪಾಂಜಲಿ ಶ್ರೀ ಮಹಾಪ್ರಭುಗಳ ಶ್ರೇಯಃ ಪ್ರಾರ್ಥನೆಗಳಾದ ಬಳಿಕ ವಿಜಯದಶಮಿಯ ದಿನ ಪ್ರಾತಃಕಾಲ ಪೂಜಾದಿಗಳು, ಅನ್ನಸಂತರ್ಪಣೆ, ಶ್ರೀ ಜಗದ್ಗುರುಗಳ

ಮುಕ್ತಿ ಮಂದಿರ ವಾರ್ಷಿಕೋತ್ಸವದಲ್ಲಿ

ಬಾಲ ತಪಸ್ವಿಗಳಾದ.



ಶ್ರೀ. ಷ. ಬ್ರ. ಚೆನ್ನವೀರಶಿವಾಚಾರ್ಯರು

ಹೋಟಗಿ. ಗುರುಕುಲಾಧಿಪತಿಗಳು. ಸೊಲ್ಲಾಪುರ

ವರ ಸಕಲ ಬಿರುದಾವಳಿಗಳೊಡನೆ ಸುವರ್ಣ ರಜತಾಂದೋಳಿಕಾ ಮಹೋತ್ಸವ, ಶಮಿ ಪೂಜಾ, ಉತ್ಸವ ಸಂಭ್ರಮ ಸಿಂಹಾಸನಾರೋಹಣ ಸ್ವಾಸ್ತಾವಿಕ ಭಾಷಣ, ಕಾಣಿಕಾ ಸಮರ್ಪಣ. ಶ್ರೀ ಜಗದ್ಗುರು ಮಹಾ ಸನ್ನಿಧಿಯವರ ವಿಶ್ವಶಾಂತಿ ಶುಭಸಂದೇಶ ಭಾಷಣ ಶಮಿವಿನಿಯೋಗ, ಶ್ರೇಯಃ ಪ್ರಾರ್ಥನೆಗಳು ಪಂಡಿತರ ಸನ್ಮಾನ, ಪದವೀ ಪಥಾಸಿಗಳು ಇತ್ಯಾದಿಕಾರ್ಯಕ್ರಮಗಳು ಸಕಲ ವೈಭವದಿಂದ ಜರುಗಿದವು !

ಶ್ರೀ ಜಗದ್ಗುರುಗಳ ಸನ್ನಿಧಿಗೆ ಕಳಿಸಿದ ಶುಭ ಸಂದೇಶಗಳಲ್ಲಿ ಕೆಳಗಿನದೂ ಒಂದು ಚಿಕ್ಕ ಸನ್ನಿವೇಶದಿಂದೊಡಗೂಡಿದ ಸಂದೇಶವನ್ನು ಇಲ್ಲಿ ಕೊಡಲಾಗಿದೆ !

## ಸಂದೇಶ

ಅಹಾ ! ಬಂಕಾಪೂರಕ್ಕೆ ಬಂದ ಎಂಥ ಸ್ವಾಮಿ ಇವನು ! ಲಂಗೋಟಿ ಹಾಕಿ ಬಗಲಲ್ಲಿ ತಟ್ಟಿನ ಚೀಲ ಹಿಡಿದವನು ! ದಿನಾಲು ಅನುಷ್ಠಾನ ಜಪ-ತಪಗಳನ್ನು ಆಚರಿಸುವಂಥವನು ! ಮೋಹಕ್ಕೆ ಬೀಳುವನೇ ! ಆಶಾಯುಕ್ತನೇ ! ಧರ್ಮಕ್ಕೆ ಕುಂದುಬಂತೆಂದು ಮಿಡುಕುವನು ? ತನ್ನ ಮನ ಮೆಚ್ಚುವತನಕ ಲಿಂಗಪೂಜೆ ಗೈಯ್ಯುವನು. ಈತನ ಪೂಜೆ ಎಂದೂ ಆರದ ನಂದಾದೀಪ !

ಬಂಕಾಪೂರ ತಾಲೂಕ ಗಂಗಿಬಾವಿಯಲ್ಲಿ ಮಾಡಿದ ಸಣ್ಣ ಪ್ರಮಾಣದ ಅನುಷ್ಠಾನವು ಘೋರ ವ್ಯಾಘ್ರನನ್ನು ಸಹ ಮೆಚ್ಚಿಸಿತು. ಸ್ವಾಮಿ ಪೂಜೆ ಗೈಯುವ ತನಕ ಎದುರಿನಲ್ಲಿಯೇ ಕುಳಿತೆದ್ದು ಹೋಯಿತು. ಈತನ ಏಕನಿಷ್ಠೆಯು ಎಂಥ ಝಗ ಝಗಿಸುವ ದೀಪವಿದು.

ಬಂಕಾಪೂರದವರು ಸ್ವಾಮಿಯನ್ನು ಸಹಜವಾಗಿ ಕಾಣುತ್ತಿದ್ದೆವು. ಮೊತ್ತ ಮೊದಲಿಗೇ ಹೊತ್ತು ಮೆರೆಸಿದೆವು. ಉಪನ್ಯಾಸ ಪ್ರವಚನವನು ಕೇಳುವರಾದೆವು. ಎಲ್ಲರಲ್ಲಿ ಭಕ್ತಿರಸ ಒಡೆಯಿತು. ಸೇವಕರಾಗಿ ಸೇವೆಯನ್ನು

ಗೈಯ್ಯುವರಾವೆವು. ಬರ ಬರುತ್ತ ಸ್ವಾಮಿಯ ತಪಃಪ್ರಭಾವವು ಎಲ್ಲೆಡೆಗೂ ಪ್ರಸರಿಸುತ್ತ, ವೀರಶೈವ ಧರ್ಮ ಜಾಗೃತಿಯ ಕಾರ್ಯವು ಭರದಿಂದ ಸಾಗುತ್ತ ನಡೆದಂತೆ ಜನತೆಯಲ್ಲಿ ಜಟಾವಲ್ಕಲಧಾರಿಯನ್ನು ಕ್ಷಣ ಹೊತ್ತು ನೋಡಿದರೂ ಬಹಳ ಹೊತ್ತು ನಮ್ಮ ಕಣ್ಣು ಮಂಜು ಮಂಜಾಗುವವು. ಅಂದ ಮೇಲೆ ಎಂಥ ಹೊಳೆಯುವ ದೀಪವಿದು

ಆಹಾರವನೇ ತೊರೆದು ಆಕಳ ಹಾಲನ್ನು ಅಲ್ಪವಾಗಿ ಸೇವಿಸುತ ಕಠಿಣ ತರವಾದ ತಪಗೈದು ಜಪಕುಳಿತು, ಹರಿಯುವ ನಾಗನು ತಡೆಗಟ್ಟಿ ಕಣ್ಣು ತೆರೆದು ಆತ್ಮಶಕ್ತಿಯ ಫ್ರಾಪ್ತಿಯಿಂದ ತನ್ನ ಹಿಡಿದ ಸಿದ್ಧಿಯೋಗವನ್ನು ಸಾಧಿಸಿದ ಸ್ವಾಮಿಯು ದೂರ ದೂರದಲ್ಲಿ ಸಂಚರಿಸವೆ. ಮಹಂತಿನ ಮಠದ ಅಧಿಕಾರ ಸ್ವೀಕರಿಸಿ ಮುಂದೆ ಮುಕ್ತಿ ಮಂದಿರವನು ಸ್ಥಾಪಿಸಿ, ವೀರಶೈವ ಕೋಟಿಯನು ಸೆರೆಸಿ, ಸಗ್ಗಲೋಕದ ಸೌಂದರ್ಯದ ಸೊಬಗನ್ನು ಕಾಣಲಿಕ್ಕೆ ದೊರಕಿಸಿದ ಎಂಥ ಉರಿ ಉರಿಯುವ ದೀಪವಿದು.

ಈವೇ ದಿವ್ಯ ಸ್ವಾಮಿಯಿಂದಲೇ ಮಳೆ ಬೆಳೆಗಳು ಈ ಗುರುವಿನಿಂದಲೇ ನಮಗೆ ಆರೋಗ್ಯವು ಈ ಯೋಗಿಯಿಂದಲೇ ನಮಗೆ ಸುಖವು ನಮ್ಮ ಧರ್ಮ-ಕರ್ಮಗಳ ಉದ್ಧಾರ ಉನ್ನತಿಗೂ ನಮ್ಮ ಬಾಳು-ಬದುಕುಗಳಿಗೂ ಆಶೀರ್ವಾದ ಮಾಡಲಿಕ್ಕೆ ಈ ಯತಿಯು ಬೇಕು. ಅಂದ ಮೇಲೆ ಎಂಥ ಉಪಕಾರಿ ದೀಪವಿದು.

ಭಕ್ತ ಮಾಹೇಶ್ವರರು ಈ ತೇಜಸ್ವಿಯನ್ನು ಭಜನೆಗೈದು ಕರೆಯುತ್ತಾರೆ ಹರುಷದಿಂದ ಹಾಡಿ ನಲಿಯುತ್ತಾರೆ. ಧರ್ಮ ಶ್ರವಣ ಕೇಳುತ್ತಾರೆ ಅಧರ್ಮಿಗಳು ಎಚ್ಚತ್ತು ಧರ್ಮದಂತೆ ನಡೆಯುತ್ತಾರೆ. ಇಂಥ ಸ್ವಾಮಿಯು ಈಗ ತನ್ನ ಆಚಾರ ವಿಚಾರಗಳ ಶೀಲ ಸ್ವಭಾವಗಳ ಭಕ್ತಿ ಪ್ರೀತಿಗಳ ಏಕನಿಷ್ಠೆ ಧೃಢತೆಗಳ ಆಶಾನಿರಾಶೆಯ ಲೋಕೋದ್ಧಾರದೊಡನೆ, ವೀರಶೈವ ಧರ್ಮ ವೃಕ್ಷವು ಸತ್ಫಲಗಳನ್ನು ಕೊಡಲು ತಕ್ಕುದಾಗಿದೆ. ಅಂತೆಯೇ ಇವರು ನಮ್ಮ ನಾಡಿನಲ್ಲಿ ಅಷ್ಟೇ ಅಲ್ಲ ಕಾಶಿಗೂ ಸಹ ಹೋಗಿ ಬಂದಿದ್ದಾರೆ ಇಂತಹ ವೈರಾಗ್ಯ ಮೂರ್ತಿಯ ವಿಶಾಲವ್ಯಕ್ತಿಯನು ಪಸರಿಸಿ, ಶ್ರೀ ಮದ್ರಂಭಾ

ಭುರಿಯ ರನ್ನಪೀಠದ ಮೇಲೆ ಕುಳ್ಳಿರಿಸಿತು. ಶ್ರೀ ಶಿವಯೋಗಿಗಳು ಪಾವನ ತಪಸಿಗಳೂ ನಮ್ಮೆಲ್ಲರನ್ನು ಆಶೀರ್ವದಿಸಿ ಕಾಪಾಡಲಿಕ್ಕೆ, ನಮ್ಮ ಮತೋದ್ಧಾರಕ್ಕೆ ಶ್ರೀಗಳವರು ಕೂಸಿನ ತಾಯಿಯಂತೆ, ರಕ್ಷಿಸಲೆಂದು ಬೇಡಿ ಕೊಳ್ಳಲಿಕ್ಕೆ ನಮಗೆ ಇಂಥ ಸ್ವಾಮಿವರ್‍ಯರು ಬೇಕು. ಜಗದ ಪೊಗಳಿಕೆ ತೆಗಳಿಕೆಗಳಿಗೆ ಅಂಜದ ಅಳುಕದ ಉಲ್ಲಾಸದಿಂದ ಶ್ರೀ ಮದ್ರಂಭಾಪುರಿ ಪೀಠವನ್ನೇರಿ ಸಂಚರಿಸುವ ಜಗದ್ಗುರು ಪ್ರಸನ್ನ ರೇಣುಕಾ ನಮಿಪೆ.

ಜಗದ್ಗುರು ಪ್ರಸನ್ನ ರೇಣುಕ ಪರಮಾತ್ಮ ಸ್ವರೂಪವೇ ನಿಮ್ಮ ಕೃಪಾಶೀರ್ವಾದಗಳಿಂದ ನಮ್ಮೆಲ್ಲ ಜನತೆಗೆ ಶಾಂತಿ ಸಮೃದ್ಧಿಗಳುಂಟಾಗಲಿ ವಿಜಯಾ ದಶಮಿಯೆಂಥ ಶುಭದಿವಸದಲ್ಲಿ ಆದ್ಯ ರೇಣುಕರನ್ನು ಪರಮಾತ್ಮ ನನ್ನು ಬೇಡಿಕೊಂಡು ಜಗದ್ಗುರುಗಳಿಗೂ ಸಕಲ ಪ್ರಾಣಿಗಳಿಗೂ ಆಯು ರಾರೋಗ್ಯ ಬೆಳೆದು ದ್ವೇಷಾಸೂಯೆಗಳು ಅಳಿದು, ಸಂತೋಷವುಳಿದು ಭಕ್ತಿಯ ಕಡಲುಕ್ಕಿ ಧರ್ಮಾಚಾರದ ನೊರೆಹೊರಟು ಕರ್ಮದ ಕಶ್ಮಲ ಕೊಳೆತು ನಿರ್ಮಲ ಮುಕ್ತಿಯ ಉಗಿಯೆದ್ದು; ಕೈಲಾಸದ ಮೇಘದಲಿ ಬೆರೆತು ಶಿವ ಸ್ವರೂಪಿ ರೇಣುಕರ ಆತ್ಮ ತೇಜಸ್ಸು ಪ್ರತಿಭೆ ತಪಃ ಪ್ರಭಾವ, ಜಪ—ತಪ ಪೂಜೆಗಳ ತಂಗಾಳಿ ತಾಕಿ, ವೀರಶೈವ ಮಾನಕೋಟ ಭಕುತ ಭೂಮಿಗೆ ಕೃಪಾಶೀರ್ವಾದಗಳ ಬಳಬಳ್ಳನಿಯು ಸುರಿದು ಈ ನೆಲವೊ ಪುಣ್ಯ ಭೂಮಿ ಯಾಗಿ ಮೋಕ್ಷದಾಗರವಾಗಿ, ಶಾಂತಿಸದನವಾಗಿ, ಹೊಟ್ಟೆಬಟ್ಟೆಗಳ ಕ್ಷಾಮ ವಳಿದು, ಸುಸಂಸ್ಕೃತಿ ಭರತಿಯಾಗಿ, ಭಕ್ತರುದ್ಧಾರದ ತೆರೆಯಿಂದ ಸಕಲ ಸಂಪತ್ತ ಸಮೃದ್ಧಿಯ ಸಾಗರವು ಭೋರ್ಗರೆಯಲಿ; ಇದುವೇ ನನ್ನಯ ಬೇಡಿಕೆ. ವಂದೇ ರೇಣುಕಂ.

## ಕಾಶಿಗೆ ಆಕಾಶ ಮಾರ್ಗವಾಗಿ ಪ್ರಯಾಣ

ತಿಪಟೂರಲ್ಲಿ ದಸರಾ ಮಹೋತ್ಸವ ಕೊನೆಗಂಡ ಬಳಿಕ ಶ್ರೀ ಮಹಾ ಸನ್ನಿಧಿಯವರು, ಕಾಶಿಗೆ ಪ್ರಯಾಣ ಮಾಡುವ ಮಂಗಲ ಕಾರ್ಯದ ಸಂದರ್ಭ ಉಂಟಾಯಿತು. ಹಿಂದೊಮ್ಮೆ ಶ್ರೀಗಳವರು ಭೂಮಾರ್ಗವಾಗಿ

ಕಾಶಿಯನ್ನು ಸಂದರ್ಶಿಸಿದಂಥವರು ಈ ಸಾರೆ ಆಗಸದಲ್ಲಿ ಆಕಾಶಯಾನ ಮೊಂದಿಗೆ (ವಿಮಾನದಲ್ಲಿ) ಪ್ರಯಾಣ ಮಾಡಬೇಕಾಯಿತು ಕಾಶೀ ಪೀಠಕ್ಕೆ ನೂತನ ಜಗದ್ಗುರುಗಳ ಪಟ್ಟಾಭಿಷೇಕದ ಸಮಾರಂಭವು, ಇವರ ಮತ್ತು ಉಜ್ಜಯನಿಯವರ ಹಸ್ತದಿಂದ ನೆರವೇರ ಬೇಕಾಯಿತು. ಪ್ರಯುಕ್ತ ಶ್ರೀಗಳವರು ತಮ್ಮಆಸ್ಥಾನ ಪಂಡಿತರನ್ನೊಳಗೊಂಡು ಹೋಟಗಿ ಶ್ರೀಷ ಬ್ರ. ಚೆನ್ನವೀರ ಶಿವಾಚಾರ್ಯರನ್ನು ತಮ್ಮೊಂದಿಗೆ ಹೊಂದಿಕೊಂಡು ಬೆಂಗಳೂರಿ ನಿಂದ ಕಾಶಿಗೆ ವಿಮಾನದಿಂದ ಕ್ಷೇಮಕರವಾಗಿ ಪ್ರಯಾಣ ಮಾಡಿದರು. ಆಕಾಶಯಾನವು ಆಯಾಸವನ್ನುಂಟು ಮಾಡುವಂಥಾದ್ದು. ಆದರೆ ಸ್ಸುಖ ರೂಪವಾಗಿ ಕಾಶೀ ಪೀಠವನ್ನು ಸೇರಿ ನೂತನ ಜಗದ್ಗುರುಗಳಿಗೆ ಮುಕುಟಾ ರೋಹಣ ಪಟ್ಟಾಭಿಷೇಕವನು ಗೈದು. ರಂಭಾಪುರಿ ಪೀಠದ ನೂತನ ಜಗ ದ್ಗುರುಗಳ ಪಟ್ಟಾಭಿಷೇಕವು ವಿಶೇಷ ವಿಜೃಂಭಣೆಯನ್ನುಂಟು ಮಾಡಿತು

ಶ್ರೀಗಳವರು ಕಾಶಿಯಲ್ಲಿದ್ದು ಎಸಿತೋ ವರ್ಷ ಸಂಸ್ಕೃತವನ್ನು ಓಡಿ ದವರಲ್ಲ, ಇಲ್ಲಿಯೇ ಸೊಲ್ಲಾಪುರದಲ್ಲಿ ಮನಗೊಟ್ಟು ಅಭ್ಯಾಸ ಮಾಡಿದ ಸಾಧನೆ ಸಿದ್ಧಿ ಪುರುಷರು ನೆರೆದ ಮೂರು ನೂರು ಜನ ಪಂಡಿತರ ಜ್ಞಾನ ಮಂದಿರದ ಸಭೆಯಲ್ಲಿ ಸಂಸ್ಕೃತ ಭಾಷೆಯಲ್ಲಿ ಮಾಡಿದ ಭಾಷಣದಿಂದ ಪಂಡಿ ತರು ತಲೆದೂಗಿದರು. ಶ್ರೀಗಳ ವಾಕ್ ಪಾಂಡಿತ್ಯಕ್ಕೆ ಸಭಿಕರು ಮೆಚ್ಚಿದರು ಹೆಚ್ಚೇನು ? ರಂಭಾಪುರಿ ಪೀಠದೊಡೆಯನು ವೈಭವದೊಂದಿಗೆ ಸಭಾಸ್ಥಾನಕ್ಕೆ ಆಗಮಿಸಿದಾಗ ಭಾರತಚಕ್ರವರ್ತಿಯ ನೆನಪುಯಾರಿಗೂ ಬರದಿರಲಿಲ್ಲ. ಇಷ್ಟು ಸೌಂದರ್ಯ ಠೀವಿಯುಳ್ಳ ಮಹಾ ಸನ್ನಿಧಿಯು ಕಾಶೀ ವಿಶ್ವ ವಿದ್ಯಾಲಯ ದಲ್ಲಿಯೂ ಸಹ ತರುಣರು ಕೂಡಿಸಿದ ಸಭೆಯಲ್ಲಿ "ತರುಣರತಾರಕಮಂತ್ರ" ಎಂಬ ವಿಷಯದ ಮೇಲೆ ಮಹತ್ಪೂರಿತ ಭಾಷಣ ಮಾಡಿದರು. ಈ ಭಾಷ ಣವು ಇಂದಿನ ತರುಣರಿಗೆ ಮಾರ್ಗದರ್ಶಕವಾಗಿತ್ತು. ಶ್ರೀಗಳ ಬೆಂಬಲ ವಾಗಿ ಕಾಶಿಯಲ್ಲಿ ಕನ್ನಡದ ಸುರಿಮಳೆಯಾಯಿತು, ಕನ್ನಡದ ಮೊಳಕೆ ಬೆಳೆ ಫಲವನ್ನುಂಟು ಮಾಡುವಂತಾಯಿತು ಎಂಬುದು ಸಾಮಾನ್ಯ ವಿಷ ಯವೇ ? ಉತ್ತರ ಹಿಂದುಸ್ತಾನದಲ್ಲಿ ಕಾಶಿಯಲ್ಲಿ ಕನ್ನಡದ ಮ್ಹೇಲ್ಮೆ ಅಹಾ ಏರಿಸಿ, ಹಾರಿಸಿ, ಕನ್ನಡದ ಬಾವುಟ! ಗಾಳಿಯಲಿ ಪಟಪಟ! ಬಾನಿನಲಿ ಥಟ

ಛಟ! ಏರಿಸಿ, ಹಾರಿಸಿ; ಕನ್ನಡದ ಬಾವುಟ! ಕನ್ನಡಂ ಏಳ್ಗೆ! ಕನ್ನಡಂಬಾಳ್ಗೆ ಕನ್ನಡಂ ಗೆಲ್ಗೆ! ಕನ್ನಡಿಗರೊಡೆಯ ಓ ಜಗದ್ಗುರು ರಂಭಾಪುರೀಶ್ವರ! ಎನ್ನು ವಂತಾಗಿತ್ತು. ಹೀಗೆ ಕಾಶೀಪೀಠದ ನೂತನ ಜಗದ್ಗುರುಗಳ ಅಧಿಕಾರ ಸ್ವೀಕಾರವಾದ ಬಳಿಕ ಆಕಾಶಯಾನದಿಂದ ಬೆಂಗಳೂರಿಗೆ ಮರಳಿ ತಲುಪಿ ದರು. ಇಲ್ಲಿಯ ವರೆಗೆ ಆಕಾಶ ಮಾರ್ಗದಿಂದ ಪ್ರಯಾಣ ಮಾಡಿದ ನಮ್ಮ ಗುರುವರ್ಯರಲ್ಲಿ ಇವರೇ ಮೊದಲಿಗರು. ಇದರಿಂದ ರಂಭಾಪುರಿ ಪೀಠದ ಮಹೋನ್ನತಿಯು ಒಡೆದು ಸ್ಪಷ್ಟಪಡಿಸುತ್ತದೆ.

## ತಿಪಟೂರಿನಲ್ಲಿ ಕುಂಭಾಭಿಷೇಕ; ಮಹೋತ್ಸವ.

ಶಿವಯೋಗಿಯು ತನ್ನ ಜೀವನವನ್ನು ಶಿವನಿಗೆ ಸಮರ್ಪಿಸಿ; ಶಿವ ಸಂಸಾರಿಯಾಗಿರುವದರಿಂದ ಅವನ ದೇಹಕ್ರಿಯೆಗಳೆಲ್ಲವೂ ಶಿವಾರ್ಚನ ಕ್ರಿಯೆ ಗಳಾಗಿರುವವು.

ಜನನ-ಮರಣ ಜೀವನಾತ್ಮಕ ಸಂಸಾರದಲ್ಲಿ ಅಲ್ಪಶಕ್ತಿ ಅಲ್ಪಜ್ಞಾನಗಳುಳ್ಳ ಜೀವಾತ್ಮನು ಭೋಗ್ಯವಸ್ತುಗಳ ಮೋಹಪಾಶಕ್ಕೊಳಗಾಗಿ; ದಿಕ್ಕುಗಾಣದೆ ಅಲ್ಪ ಸುಖವನ್ನೇ ಮಹತ್ತನ್ನವಾಗಿ ಭಾವಿಸಿ, ನಾನಾವಿಧ ದುಃಖ ಪರಂಪರೆ ಗೊಳಗಾಗಿರುವನು. ಇಹ ಭೋಗ, ಶಿವಯೋಗಾತ್ಮಕವಾದ ಮನುಷ್ಯ ಜೀವನದ ರಹಸ್ಯವು ಸದ್ಗುರುಸೇವಾ ಪ್ರಾಪ್ತ ಗುರುಕಾರುಣ್ಯ ಸುಜ್ಞಾನ ಯೋಗದಿಂದಲ್ಲದೆ, ಬೇರೆ ಮಾರ್ಗದಿಂದ ತಿಳಿಯಲು ಸಾಧ್ಯವಾದುದಾಗಿದೆ ಮೋಹಪಾಶದ ಮಹಾಪುರುಷರನ್ನೇ ಕಟ್ಟಿಕೆಡೆಹುತ್ತಿದ್ದಾಗ ಅಲ್ಪ ಪ್ರಾಣಿ ಗಳ ಗಣನೆಯೆಲ್ಲಿ? ಜೀವನು ವಿಷಯಾನಂಧವನ್ನೂ ಮೀರಿ, ಅಥವಾ ವಿಷಯಾನಂದದ ಸೋಂಕಿಲ್ಲದೆ ಶಿವಾನಂದವನ್ನು ಇಲ್ಲವೆಶಿವತಾದಾತ್ಮ್ಯವನ್ನು ಪಡೆಯಬೇಕಾದರೆ ದೇಹಯಾತ್ರೆಗೆ ವಿರೋಧವಾಗದಂತೆ ನಿರಂತರದಲ್ಲಿಯೂ ಶಿವವೃತಾಚರಣೆಯ ತತ್ಪರನಾಗಿರಬೇಕು.

ಕುರುಡಿಕುಠಾರಿ ನ್ಯಾಯದಂತೆ ಶಿವಭಾವಪರಾಯಣಸಾದರೆ ಶಿವಾನಂದ ಶಿವತತ್ವಗಳ ಜೀವನವೇ ಶುದ್ಧ ಶಿವಾನುಸೆಮಯವಾದರೆ ಭವಕ್ಕೆಡೆಯುಂಟೆ! ಪೂಜೆಯೆಂದರೆ ಯಾವ ವಸ್ತುವಿನಿಂದ ಯಾವ ಫಲವನ್ನು ಪಡೆಯಬೇಕಾಗಿರುತ್ತದೆಯೋ ಆ ವಸ್ತುವಿಗೆ ತ್ರಿಕರಣ ಪೂರ್ವಕವಾಗಿ ಸಲ್ಲಿಸಬೇಕಾದ ಶಾಸ್ತ್ರೀಯವಾದ ಉಪಚಾರವೆಂದರ್ಥವು ಮತಸ್ಥಾಪನಾಚಾರ್ಯರು ತೋರಿಸಿರುವ ಮಾರ್ಗದಲ್ಲಿ ಇಷ್ಟ ದೇವತೆಯನ್ನಾರಾಧಿಸುವದು; ಪ್ರತಿಯೊಬ್ಬರ ಕರ್ತವ್ಯವಾಗಿದೆ. ಶಿವಾರ್ಚನೆಯು ಸರ್ವಾಪತ್ಪರಿಹಾರಕವೂ ಸಮಸ್ತ ಸಂಪತ್ಪ್ರದಾಯಕವೂ ಆಗಿದೆ, ಅಜ್ಞರು ಇದರ ಮರ್ಮವನ್ನರಿಯರು, ಸದಾ ಸಂಸ್ಮರಣೀಯರೂ, ವೀರ ವೈರಾಗ್ಯ ಮೂರ್ತಿಗಳೂ, ನಿರ್ಮಲ ಕೀರ್ತಿಗಳೂ, ಜಗಜ್ಜ್ಯೋತಿಗಳೂ ಆದ ಶ್ರೀಮದ್ರಂಭಾಪುರೀ, ವೀರ ಸಿಂಹಾಸನಾಧೀಶ್ವರ ಶ್ರೀ ೧೦೦೮ ಶ್ರೀ, ಜಗದ್ಗುರು ಪ್ರಸನ್ನ ರೇಣುಕ, ವೀರ ಗಂಗಾಧರ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಸರ್ವದಾ ಶಿವಪೂಜಾತತ್ಪರರಾಗಿ ತಮ್ಮ ಪಾವನ ಜೀವನದಿಂದ ಜಗತ್ತನ್ನೇ ಬೆಳಸುತ್ತಿರುವರು. ಇವರು ತಿಪಟೂರ ವೀರಶೈವ ಮಂಡಳಿಯವರ ಪ್ರಾರ್ಥನೆಯನ್ನಂಗೀಕರಿಸಿ, ನಗರಕ್ಕೆ ಚಿತ್ತೈಸಿ, ಪ್ರವೇಶೋತ್ಸವ ದಸರಾ ಮಹೋತ್ಸವ, ಶಾಸ್ತ್ರಕಲಾಪಗಳಿಂದ ಅಖಿಲರನ್ನು ಆನಂದ ಸಾಗರದಲ್ಲಿ ಲೋಲಾಡುವಂತೆ ಮಾಡಿದರು ಬಳಿಕ ಶ್ರೀ ಕಾಶೀ ಕ್ಷೇತ್ರಕ್ಕೆ ಆಕಾಶಮಾರ್ಗದಿಂದ ಬಿಜಯಂಗೈಸಿ, ಶ್ರೀ ಜ್ಞಾನಪೀಠದ ಪಟ್ಟಾಧಿಕಾರ ಮಹೋತ್ಸವವನ್ನು ವಿದ್ವತ್ಸಭಾ ಶಾಸ್ತ್ರ ಕಲಾಪಗಳನ್ನು ನೆರವೇರಿಸಿ ಸಕಲ ಯಾತ್ರಿಕರನ್ನು ಸಂತೋಷಗೊಳಿಸಿ, ಹಿಂದಿರುಗಿ ತಿಪಟೂರಿಗೆ ದಯಮಾಡಿಸಿದರು. ತಮ್ಮ ಶುದ್ಧಾಚರಣದಿಂದ ಜನರಿಗೆ ಸನ್ಮಾರ್ಗ ಶಿಕ್ಷಣವನ್ನು ಕೊಡುವುದೇ ಶ್ರೀ ಮಹಾಗುರುಗಳ ಜೀವನದ ಗುರಿಯಾಗಿದೆ. ಬಗೆ ಬಗೆಯ ಶಿವಾರ್ಚನೆ ವೈಭವಗಳನ್ನು ನೋಡಿ ಭಾವಿಕರ ಭಕ್ತಿಕಲ್ಪಲತೆಯು ಚಿಗುರುತ್ತಿರುವದು ನಮ್ಮ ಸುದೈವ.

ಪುಣ್ಯ ಪರಿಪಾಕದಿಂದ ಮಹಾಸನ್ನಿಧಾನದವರು ತಿಪಟೂರಿನಲ್ಲಿಯೇ ಕುಂಭಾಭಿಷೇಕ ಮಹೋತ್ಸವವನ್ನು ನೆರವೇರಿಸಿದರು. ವೀರಶೈವ ಪುರಜನರೆಲ್ಲರೂ ಪೂಜೋತ್ಸವ ಭಾಗಿಗಳಾಗಿ, ಮಹಾದೇವ ಮಹಾ ಗುರು ಕೃಪಾಶೀರ್ವಾದಗಳಿಗೆ ಪಾತ್ರರಾಗಿ ಧನ್ಯರಾದರು.

ಉತ್ಸವ ಕಾರ್ಯಕ್ರಮವು ಗಂಗಾಪೂಜೆ, ಮಂಗಳ ಸ್ನಾನ ಜಗದ್ಗುರು ಗಳವರ ಇಷ್ಟಲಿಂಗ ಮೂರ್ತಿಗೆ ಸಹಸ್ರ ಕುಂಭಾಭಿಷೇಕ ಆ ಮೇಲೆ ಬಿಲ್ವ ಸಹಸ್ರ ಕಮಲಾರ್ಚನೆ ಮಹಾ ಮಂಗಳಾರತಿ, ಮಹಾ ಪೂಜೆ. ಅನ್ನಸಂತ ರ್ಪಣೆ ಎರಡು ಸನ್ನಿಧಾನದವರ ಉಜ್ವಲ ಭಾಷಣ, ಸಹಸ್ರದೀಪಾರ್ಚನೆ, ವೇದ ಪುಷ್ಪಾಂಜಲಿ, ಗಂಗಾತೀರ್ಥ ಪ್ರಸಾದ, ಕುಂಕುಮ-ಗಂಧ-ಪುಷ್ಪ ವಿನಿ ಯೋಗ ನಾಡಿನ ಪ್ರಭುಗಳ ಶ್ರೇಯಃ ಪ್ರಾರ್ಥನೆಯಿಂದ ಕುಂಭಾಭಿಷೇಕ ಮಹೋತ್ಸವವು ಕೊನೆಗಂಡಿತು ಬಳಿಕ ಶ್ರೀಗಳವರು ಮೈಸೂರ ನಾಡಿ ನಲ್ಲಿ ಸಂಚರಿಸುತ್ತ ಮಹಾ ಸಂಸ್ಥಾನಮಠ ಪ್ರವೇಶ ಮೂರ್ತಿ ಪ್ರತಿಷ್ಠಾಪನೆ ಗೋಸ್ಕರ ರಂಭಾಪುರಿಗೆ ದಯ ಮಾಡಿಸುವರಾದರು.

## ಭಕ್ತರ ಮನೀಷೆ

ಶ್ರೀ ಜಗದ್ಗುರು ಪ್ರಸನ್ನ ರೇಣುಕರು ರಂಭಾಪುರಿ ಪೀಠಾಧಿಕಾರಿಗಳಾ ದಂದಿನಿಂದ ಬಹಳ ಕಾಲಾವಧಿಯು ಹೋಗಿ ಹೋಗುತ್ತಿದ್ದಾರೆ ಸಿಂಹಾಸನದ ಏಳ್ಗೆಗಾಗಿಯೂ ಶ್ರೇಯೋಭಿವೃದ್ಧಿಗಾಗಿಯೂ, ಜವಾಬದಾರಿಕೆಯಿಂದ ಪರ ಮಾತ್ಮನ ಧ್ಯಾನ-ಪೂಜೆಗಳಲ್ಲಿ ಅನಂತ ಭಕ್ತಿಯಿಂದ ಅನುಷ್ಠಾನ ವ್ರತ ಗಳನ್ನು ಆಚರಿಸುತ್ತ ಸದ್ಯಕ್ಕೆ ಮೈಸೂರ ನಾಡಿನಲ್ಲಿಯೇ ತಮ್ಮ ಸಂಚಾರ ಕಾರ್ಯವನ್ನು ಕೈಕೊಂಡಿದ್ದಾರೆ. ಕೆಲವು ದಿನಗಳಲ್ಲಿ ಶ್ರೀಗಳವರ ಸಿರ್ಕಿಟಗೆ ಪರವಾನಿಗೆ ದೊರೆತು, ನಮ್ಮ ನಾಡಿನಲ್ಲಿಯೂ ಅವರು ತಮ್ಮ ದಿವ್ಯ ದರ್ಶನ ವನ್ನು ಕೊಟ್ಟು ಭಕ್ತಾದಿಗಳನ್ನು ಉದ್ಧರಿಸಿ, ಆಶೀರ್ವದಿಸುವ ದಿನವು ಬೇಗನೆ ಬರಲಿಯುವದು ಬಂದೇ ಬರುವದು: ಆ ದಿನವನ್ನು ಬೇಗ ನಿರುಕಿಸುವ ಭಾಗ್ಯ ನಮ್ಮೆಲ್ಲರಿಗೆ ಒದಗಲಿ ಎಂದು ಆ ದಯಾಘನ ರೇಣುಕನನ್ನು ಅನನ್ಯ ಭಕ್ತಿಯಿಂದ ಬೇಡಿಕೊಂಡು ಭಜನೆ ಗೈಯೋಣ.

ಪುರಾತನ ಕಾಲದಿಂದಲೂ ಹೆಸರುವಾಸಿಯಾದ ಮಹಾತ್ಮರ ಸ್ಥಳವಾದ ರಂಭಾಪುರೀ ಪೀಠದೊಡೆಯರ ಮಠದ ಹಳೇ ಕಟ್ಟಡವನ್ನು ಶಿವೈಕ್ಯರಾದ ಶ್ರೀ ಶಿವಾನಂದ ಜಗದ್ಗುರುಗಳವರು ಜೀರ್ಣೋದ್ಧಾರ ಮಾಡಿಸಿ, ಪಾಯಾ

ಭದ್ರವಾಗಿ ಕಟ್ಟಿಸಿದರಲ್ಲವೆ ? ಅದೇ ಮಠವಲ್ಲಿ ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಮಹಾ ಸ್ವಾಮಿಗಳು ರೇಣುಕರ ಮೂರ್ತಿ ಪ್ರತಿಷ್ಠಾಪನೆಯನ್ನು ಸಧ್ಯದಲ್ಲಿಯೇ ನೆರವೇರಿಸುತ್ತಾರೆ. ಹೀಗೆ ರಂಭಾಪುರಿ ಸಿಂಹಾಸನದ ಪೂರ್ವಾಭಿವೃದ್ಧಿಯೊಂದಿಗೆ ಉತ್ತರೋತ್ತರಾಭಿವೃದ್ಧಿಯನ್ನು ಹೊಂದಿಸಲು ಟೊಂಕ ಕಟ್ಟಿದ್ದಾರೆ. ಶ್ರೀಗಳವರು; ಇವರ ನೆನಹು, ಭಜನೆ ನಾಮಸ್ಮರಣೆಗಳು ಬಾಯಿಗೆ ಅಮೃತ, ಕಿವಿಗೆ ಇಂಪು; ಮನಕೆ ಸೊಂಪು; ಇದರಿಂಧ ಹೊಂದುವದು ಭಕ್ತಿಯ ಕಂಪು, ಧರ್ಮಾಚರಣೆಯ ಶುದ್ಧೀಕರಣದ ತಂಪು; ಎಲ್ಲವೂ ಶ್ರೀಗಳವರ ಸ್ವಾತ್ಮ ತೇಜದ ಬಲ; ಭವ್ಯಶಕ್ತಿಯ ಸಾಕ್ಷಾತ್ಕಾರ; ಪೂಜಾನುಷ್ಠಾನದ ಪಾವಿತ್ರ್ಯ; ಭೀಷ್ಮ ಬ್ರಹ್ಮಚರ್ಯವ್ರತ ತೇಜಸ್ಸು ಪಾಂಡಿತ್ಯ ಸಾಧನೆಯ ಶ್ರೇಯಸ್ಸು. ಇಂಥ ಮಹಾತ್ಮರಿಂದ ರಂಭಾಪುರಿ ಪೀಠದ ಮಹೋನ್ನತಿ ಇನ್ನೂ ಆಗುತ್ತಲೇ ಬೆಳಗಲಿ. ವೀರಶೈವರ ಮೊದಲ ಪೀಠದ ಪ್ರಕಾಶವು ಎಲ್ಲೆಡೆಗೂ ತನ್ನ ಕೀರ್ತಿ ಪ್ರಭಾವವನ್ನು ಬೀರಿ ತನ್ನ ಒಂದೊಂದು ಕಿರಣದ ಧರದ ಹೊಂಬೆಳಕನ್ನು ಚೆಲ್ಲಿ ನಿಜಾಚರಣೆಯ ಬುಗ್ಗೆ ಚಿಮ್ಮಲಿ. ಭಕ್ತರ ಹೃದಯ ಕಮಲವರಳಲಿ; ಶ್ರೀ ಜಗದ್ಗುರು ಪ್ರಸನ್ನ ರೇಣುಕರಿಂದ ಜಗತ್ಪಾವನವಾಗಲಿ. ಇದುವೇ ಎಲ್ಲರ ಮನೀಷೆ.

## ಎರಡು ಧ್ರುವಗಳು

ಆಗಸದಲ್ಲಿ ಎರಡು ಧೃವಗಳು ಉತ್ತರಧೃವ-ದಕ್ಷಿಣಧೃವವೆಂದು ಇವೆ. ಆದರೆ ಕನ್ನಡ ನಾಡಿನಲ್ಲಿಯೂ ಎರಡು ಧೃವಗಳಿರುತ್ತವೆಂದು ಹೇಳುವೆನು ಕನ್ನಡ ನಾಡಿನ ವೀರಶೈವ ಜನಾಂಗದಲ್ಲಿ ವಿಶೇಷ ಪ್ರಕಾರದಿಂದ ಜೀವಿಸುತ್ತ ಎರಡು ಧೃವಗಳಂತಿದ್ದು ಬೆಳಕಿನಿಂದ ಪ್ರಕಾಶಗೊಂಡಿರುವ ಮಹಾ ಸ್ವಾಮಿಗಳು ಇಬ್ಬರಿದ್ದಾರೆ. ಅವರು ಯಾರೆಂದರೆ ಒಬ್ಬರು ಕನ್ನಡ ನಾಡಿನ ಉತ್ತರ ಮೇರೆಯೆಲ್ಲೆಯ ಸೊನ್ನಲಿಗೆಯ ಪುರದ ಶ್ರೀ ಷ. ಬ್ರ. ಹೋಟಗಿ ಚೆನ್ನವೀರ ಶಿವಾಚಾರ್ಯರು ಇನ್ನೊಬ್ಬರು ದಕ್ಷಿಣ ದಿಕ್ಕಿನಲ್ಲಿ ಪರಿಶೋಭಿಸುತ್ತಿರುವ ಶ್ರೀ ಮದ್ರಂಭಾಪುರಿ ಪೀಠದೊಡೆಯರಾದ ಪ್ರಸನ್ನ ರೇಣುಕ ಜಗದ್ಗುರುಗಳು; ಇಬ್ಬರೂ ಎರಡು ಧೃವಗಳಂತೆ ನಿಶ್ಚಲವಾಗಿರುವರಲ್ಲದೇ

## — ಎರಡು ಧ್ರುವಗಳು —



ಶ್ರೀ ರಂಭಾಪುರಿ ವೀರಪೀಠದೊಡೆಯರಾದ
**ಪ್ರಸನ್ನ ರೇಣುಕರು.**
ಬಾಳೇಹೊನ್ನೂರ. [ ರಂಭಾಪುರಿ. ]



ಶ್ರೀ. ಷ ಬ್ರ. **ಚೆನ್ನವೀರಶಿವಾಚಾರ್ಯ**
ಬೃಹನ್ಮಠಾಧ್ಯಕ್ಷ ಗುರುಕುಲಾಧಿಪತಿಗಳು
ಹೋಟಗಿ. ( ಸೊಲ್ಲಾಪೂರ. )

ಸ್ಪಷ್ಟವಾದ ಉದಾಹರಣೆ ಅಥವಾ ಆದರ್ಶರಾಗಿದ್ದಾರೆ ಇವರಿಬ್ಬರ ಪರಿಚಯದ ಮಹಾತ್ಮೆಯಿಂದ ವೀರಶೈವ ಧರ್ಮದ ಕಣ್ಣನ್ನು ತೆರೆಯಿಸಲಿಕೂ ಬಹು ಸಹಾಯವಾಗುತ್ತವೆ. ಈ ಎರಡು ಧ್ರುವಗಳನ್ನು ಅರಿತುಕೊಳ್ಳೋಣ

ಚೆನ್ನವೀರ ಶಿವಾಚಾರ್ಯರು ಬಾಲ ತಪಸ್ವಿಗಳು ಪ್ರಸನ್ನ ರೇಣುಕರೂ ಘೀಸ್ತ ಬ್ರಹ್ಮಚಾರಿಗಳೂ ಶಿವಯೋಗಿಗಳು ಒಬ್ಬರಿಗೆ ಜಗದ್ಗುರು ಸ್ಥಾನ ಮುಖ್ಯವಾಗಿದೆ. ಭಕ್ತಿಯ ಬೆಳಕನ್ನು ಬಿತ್ತರಿಸುವವರು ಒಬ್ಬರು; ಧರ್ಮಾಚರಣೆಯನ್ನು ವಿಶಾಲಗೊಳಿಸುವವರು ಇನ್ನೊಬ್ಬರು

ಚೆನ್ನವೀರ ಶಿವಾಚಾರ್ಯರು ವೀರಶೈವ ಜನಾಂಗದ ಒಳ ಬಲವನ್ನು ಹಸನಗೊಳಿಸುವವರು; ಪ್ರಸನ್ನ ರೇಣುಕರು ಇವೇ ಜನಾಂಗದ ಹೊರ ಜಗತ್ತನ್ನು ಹರಿಗೊಳಿಸುವವರು. ಇವರದು ಧರ್ಮ ಕಾರ್ಯವೆನಿಸಿದೆ ಅವರದು ವಿದ್ಯಾ ಪ್ರಸಾರ ಕಾರ್ಯವಾಗಿದೆ ಇವರ ಧರ್ಮ ಕಾರ್ಯಗಳು ಹೊರ ಜೀವನದಲ್ಲಿ ಕೂಡಿಕೊಂಡಿವೆ ಅವರ ವಿದ್ಯಾಪ್ರಸಾರವು ಒಳ ಜೀವನದಿಂದ ಕಿಡಿಗೊಂಡಿದೆ. ಇಬ್ಬರ ಧ್ರುವಗಳೆರಡೂ ಪ್ರಕಾಶಿಸುವವು. ಪ್ರಸನ್ನ ರೇಣುಕರು ಮುಂಗಾಣಿಯೂ ದಕ್ಷಿಣ ಧ್ರುವ; ಚೆನ್ನವೀರ ಶಿವಾಚಾರ್ಯರು ಹಿನ್ನೆಲೆಯಾದ ಉತ್ತರ ಧ್ರುವ; ಇಬ್ಬರೂ ಮಾಡುವ ಕಾರ್ಯಗಳು ಒಂದೇ ಆಗಿವೆ. ಕಾರ್ಯ ರಂಗಗಳು ಬೇರೆ ಬೇರೆ ಇದ್ದರೂ ಸ್ಥಾನವು ಒಂದೇ ಆಗಲಿದೆ, ಆಗಲಿ.

ಕನ್ನಡದ ಉತ್ತರ ಭಾಗವು ಚೆನ್ನವೀರ ಶಿವಾಚಾರ್ಯರಿಗೆ ಬಾಲತಪಸ್ವಿಗಳನ್ನಾಗಿ ಗುರು ಕುಲದೊಡೆಯರನ್ನಾಗಿ ನಿರ್ಮಿಸಿದೆ. ಕನ್ನಡದ ದಕ್ಷಿಣ ಭಾಗವು ಪ್ರಸನ್ನ ರೇಣುಕರಿಗೆ ರಂಭಾಪುರೀ ಪೀಠವನ್ನು ನೀಡಿದೆ. ಒಬ್ಬರ ತಪಸ್ಸಿನಿಂದ ಧರ್ಮ ಬೆಳಗುವದು. ಇನ್ನೊಬ್ಬರ ಜಪದಿಂದ ಧರ್ಮದ ಬೆಳಕು ತೊಳಗುವದು. ಶಿಷ್ಯರು ಭಕ್ತಿ ಗೀತ ಹಾಡುವರು; ಆಚಾರ್ಯರು ಮಂತ್ರ ಪಠಿಸುವರು, ಜಗದ್ಗುರುಗಳು ಭಕ್ತರಿಗೆ ದೀಕ್ಷೆ ಮಾಡುವರು, ಇಲ್ಲಿ ಭಕ್ತವೃಂದವು ಮೈದಾಳಿತು, ಅಲ್ಲಿ ವಿದ್ಯಾರ್ಥಿ ವೃಂದವು ತಲೆಯೆತ್ತಿತು,

ಅಲ್ಲಿ ಒಳ ಜೀವನವನ್ನು ತಳಹದಿ ಹಾಕಲಾಗಿದೆ. ಇಲ್ಲಿ ಹೊರ ಜೀವನದ ಮೇಲ್ಮೆಯನ್ನು ನಿಲ್ಲಿಸಲಾಗಿದೆ.

ಶ್ರೀ ಪ್ರಸನ್ನ ರೇಣುಕರ ವೇದ ವಾಙ್ಮಯವು ಒಲಿದು ತಮ್ಮ ಸ್ವರೂಪವನ್ನು ಪ್ರಕಟಿಸಿದವು ಅಂತೆಯೇ ಶ್ರೀಗಳಿವರು ಕೇವಲ ಸ್ವಾಮಿಗಳಾಗಲಿಲ್ಲ, ಯೋಗಿಗಳಾಗಲಿಲ್ಲ, ಲೇಖಕರೂ ಅಹುದು, ಮಹದ್ಗ್ರಂಥಕರ್ತರೂ ಅಹುದು ಅಂತೆಯೇ "ಸರ್ವಾನುಕೂಲ ಶಿವಪೂಜಾವಿಧಿ" ಸಂದೇಶ, ನಿಂದಕರು, ನಿತ್ಯ ಸುಖದಾಯಕರು, ಎಂಬ ಹೊತ್ತಿಗೆಗಳನ್ನು ಬರೆದರಲ್ಲದೆ ಪ್ರಾರಂಭದ ಸಂಚಾರ ಕಾಲದಲ್ಲಿ ಸಮಾಜ ಸುಧಾರಕ ಎಷ್ಟೋ ಹಸ್ತ ಪತ್ರಿಕೆಗಳನ್ನು ಪ್ರಕಟಿಸಿ ಜನ ಜಾಗೃತಿಯನ್ನುಂಟು ಮಾಡಿದ್ದಾರೆ

ಶ್ರೀ ಚೆನ್ನವೀರ ಶಿವಾಚಾರ್ಯರು ಗ್ರಂಥ ಮಾಲೆಯನ್ನೇ ಹೆಣೆದಿದ್ದಾರೆ ಮರಾಠಿ ಗ್ರಂಥಗಳನ್ನೂ, ಕನ್ನಡ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಇಬ್ಬರೂ ಭಾಷಣಕಾರರು, ವೇದೋಪನ್ಯಾಸಗಳನ್ನು ಸರಳವಾಗಿ ತಿಳಿಸಿ ಹೇಳಬಲ್ಲವರು.

ಈ ಮಹಾ ಸನ್ನಿಧಿಗಳಿಬ್ಬರೂ ಎರಡು ಧೃವಗಳಾಗಿ ಸ್ವಯಂಪ್ರಕಾಶದಿಂದ, ತಮ್ಮ ಜೀವನಕ್ಕೂ ನಮ್ಮ ಧರ್ಮಕ್ಕೂ ಮಹದುಪಕಾರೋದ್ಧಾರವನ್ನು ಮಾಡುತ್ತಿದ್ದಾರೆ. ಇವರ ಕಾರ್ಯದ ವಿಶಾಲವು ಬಹುಕಾಲಬಾಳುವಂಥದೂ ಆಗಿವೆ ಇವರು ಗಳಿಸಿದ ದಿವ್ಯ ಬೆಂಬಲ ಕುಲದೇವರ ಉಪಾಸನೆಯನ್ನು ಮಾಡಿ, ಅಖಂಡ ಜೀವನವನ್ನೇ ಧ್ಯೇಯ ಸಾಧನೆಗಾಗಿ ಮುಡಿಪಿಟ್ಟು, ಬಾಳಿನಲ್ಲಿ ಗೆಲುವನ್ನು ಪಡೆದಿದ್ದಾರೆ. ಇವರ ಬೆಂಬಲದಿಂದ ಇಷ್ಟಲಿಂಗದಲ್ಲಿ ಅಷ್ಟು ಶ್ರದ್ಧೆಯಿಟ್ಟು ನಮ್ಮ ಒಳಗಿನ ಹಾಗೂ ಹೊರಗಿನ ಕಣ್ಣುಗಳು ಈ ವಿಷಯವನ್ನು ದೃಷ್ಟಿಸತಕ್ಕದ್ದು. ಹೀಗೆ ಮಾಡಿದ್ದಾದರೆ ಈ ಎರಡೂ ಧೃವಗಳಂತೆ, ಪ್ರತಿಯೊಬ್ಬ ಕನ್ನಡಿಗನ ವೀರಶೈವನ ಎರಡೂ ಕಣ್ಣುಗಳು ತೆರೆಯುವವು, ಆ ಕಣ್ಣು ತೆರೆದಾಗಲೇ ಇಹ-ಪರಗಳು ಸಾಧಿಸುವವಲ್ಲವೆ ?

ಬಾಂಧವರೇ ! ಒಳ್ಳೇ ಪರಮ ವೈಭವದಿಂದ ಹಿರಿಯ ಅಟ್ಟಹಾಸದಿಂದ ಶ್ರೇಷ್ಠ ಗದ್ದುಗೆಯನ್ನೇರಿ ಸಕಲಷ್ಟೈಶ್ವರ್ಯ ಸಂಪತ್ತಿನಿಂದ ಮೆರೆ

ಯುವ ನಮ್ಮ ರಂಭಾಪುರೀ ಜಗದ್ಗುರುಗಳ ನುಡಿ ಸಂಸ್ಕೃತಿಗಳನ್ನು ಒಳ್ಳೆ ಎಚ್ಚರಿಕೆಯಿಂದ ಬೆಳೆಸಿ ಉಳಿಸಿ ಮೊಳಗಿಸಿಕೊಳ್ಳುವದು ಅವಶ್ಯ. ಮಾನವ ಜೀವನದ ಸುಖ ದುಃಖಗಳನ್ನೂ ಆಪೋತ್ಕರ್ಷಗಳನ್ನೂ ತಿಳಿಯುವ ಸಾಮರ್ಥ್ಯವು ಇವರಲ್ಲಿದೆ ಈ ಸಾಮರ್ಥ್ಯವು ಈಡೇರುವಂತೆ ಶ್ರೀ ೧೧೦೮ ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಮಹಾ ರಾಜೇಂದ್ರ ಮಹಾ ಸ್ವಾಮಿಗಳು ನಡೆಯಿಸಲೆಂದು ಪ್ರಾರ್ಥಿಸುವಾ !

ಶ್ರೀ ಜಗದ್ಗುರು ಪಂಚಾಚಾರ್ಯ ಮಹಾರಾಜಕೀ ಜಯ್

ಶ್ರೀ ಮದ್ರಂಭಾಪುರಿ ವೀರ ಸಿಂಹಾಸನಾಧೀಶ್ವರ ಶ್ರೀ ೧೧೦೮ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಮಹಾರಾಜೇಂದ್ರ ಮಹಾ ಶಿವಾಚಾರ್ಯರಿಗೆ ಜಯವಾಗಲಿ,

ಒಂದೇ ರೇಣುಕಂ !

# ಯಾರಿವನು ?

ಅಖಂಡ ಬ್ರಹ್ಮನೊಡನೆ ಸರ್ವಾಶ್ರಯ ಶಂಭುಲಿಂಗನೊಡನೆ ಅಭಿನ್ನತೆಯನ್ನು ಅನುಭವಿಸಿಹನು. ಪರಿಪೂರ್ಣಭಾವ ವಸ್ತ್ರ ತೊಟ್ಟಿಹನು. ನಿರಂಕುಶ ತೃಪ್ತಿ ರಸವನು ಸವಿದಿಹನು ಸಹಜ ಸ್ಥಿತಿಯಲ್ಲಿ ಇದ್ದು ನಿಜಾನಂದ ಪಡೆದಿಹನು, ಇವನಾರು ?

ದೇಹವನು ಮನ್ನಿಸದೆ, ದೇಹವಹಣತೆಯ ಮಾಡಿ, ವಿರತಿಯೆಂಬ ಬತ್ತಿಯ ನೀಡಿ ಹೃದಯ ಗ್ರಂಥಿಯ ಬಿಡಿಸಿ ಭಕ್ತಿರಸ ತೈಲವನೇ ಶೀವಿ ಎಂದಿಗೂ ಆರದ ಆತ್ಮ ಪರಂಜ್ಯೋತಿಯನ್ನು ಬುದ್ಧಿಯಲ್ಲಿ ಏಕತ್ವ ಮಾಡಿಕೊಂಡು ಬೆಳಗುವನಿವನಾರು ?

ಸ್ವಸ್ಥನ ನಡೆ ನುಡಿಯಲಿ ಒಂದಾಗಿಹನು. ಒಳಗೆ ಹೊರಗೆ ಒಂದಾದ ಆನಂದ ಸ್ವರೂಪನು; ಸಾಧನ ಸಾಧ್ಯಗಳೊಡನೆ ಸಮರಸ ವೈದಿಹನು.

ಆತ್ಮವೇ ಆವನ ಲಿಂಗ! ಅದ್ವೈತಯಾನಂದವೇ ಅವನ ಲಿಂಗ; ಲಿಂಗಾಂಗ ಸಮರಸವೇ ಆತನ ಕುರುಹು, ಆತನ ಉಸಿರು; ಉಸುರಿದಿಪ್ಪ ಅನುಭವವೇ ಆತನಆಶಿರ.ಹು-ತೋರದಿಪ್ಪ ಶಿವಸದನವೇ ಆತನ ಇರವು; ಆತನಾರು? ನಾನ ರಿಯೆ ಯಾಕೆ? ತಾನೇ (ಅಹಂಭಾವ) ವುದಿಯೆಡೆ ಸಕಲ ಭಾವದೊಳು ವರ್ತಿಪನು.

ಸದ್ಭಾವವೇ ಒಡಲು ಆತನಿಗೆ, ಶಾಂತಿಯೇ ಆಸನ; ವಿವೇಕವೇ ಮಿತ್ರ ಬುದ್ಧಿಯೇ ಸತಿ, ಸಂತೋಷವೇ ಸುತ; ನಂಬಿಕೆಯೇ ತಾಯಿ; ಧರ್ಮವೇ ವಾಹನ; ಮೋಕ್ಷವೇ ದೇಶ, ನಿರಾಭಾರಿಯವನು- ನಿರ್ಮಲನು-ನಿರುಪಾಧಿ ಕನು-ನಿರ್ವ್ಯಾಜ್ಯನು- ನಿರ್ಲಿಪ್ತನು- ನೇಮವಂತನು- ಸ್ವತಂತ್ರನು- ಸ್ವಯಂ ಪ್ರಕಾಶನು- ರಾಗ ರಹಿತನು-ಕ್ರಿಯಾರಹಿತನು ಕರ್ಣ ವಿಜಯಿಯು-ಅಗೋ ಚರನು- ಅಲೌಕಿಕನು ನಿತ್ಯಮುಕ್ತನು ಆರಿವನು? ನುಡಿದು ಹೇಳುವ ಡಂಬರೆ ತಮ್ಮ ಹೆಗಲನೇರಿ ತಾವು ನಡೆವೆವು ಎಂದು ಉಸುರುವವನಂತೆ ಅಸಂಭವವಾಗುವದು.

ಕಳಿತಹಣ್ಣು- ಮರಳಿಕಾಯಿ ಆಗದಂತೆ ಕಾಮಾದಿ- ಮಲಿನ ವೃತ್ತಿ ಗಳಿಂದ ಸ್ಥಿತಗೊಳ್ಳುವ ಬಾಳನ್ನು ಮರಳಿ ಬಯಸನು. ಹಿಂದ ಸುಖ- ದುಃಖಗಳನ್ನು ಬೇಡೆನ್ನನು, ಮುಂದಿನದನ್ನು ಬಯುಸನು.

ಜಗದನು ಸರಣಿಯನು ಮುನ್ನವೇ ತಿಳಿಯಲೆತ್ನಿಸನು. ಕೊರಳಲ್ಲಿ ಹಾರವನ್ನು ಅಪೇಕ್ಷಿಸನು ಹಾವನ್ನು ಉಪೇಕ್ಷಿಸುವನು, ಆರೇನಂದರೂ- ಹೇರಂತೆ ಇಪ್ಪನು; ಅವನ ಸಂಗ ಪರುಷ ಮುಟ್ಟಿದ ಕಲ್ಲಿನಂತೆ ಅವನ ಉಸಿರು ದಶೋಪನಿಷತ್ತುಗಳ ಸಾರ; ಆತನ ಇಚ್ಛೆ ಪರೇಚ್ಛೆ ಆತನ ಹೃದಯ ಕನ್ನಡಿ ಎಲ್ಲರಿಗೂ ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧನ; ಆತನ ಸುಜ್ಞಾನ ವಿವೇಕ-ವೈರಾಗ್ಯಗಳ ಆಗರ, ಯಾರಿವನು? ಆತನ ಇರವನು ಕಾಣಲು ಹೋದವನ ಸ್ಥಿತಿಯು ಸಮುದ್ರದ ಆಳವನ್ನು ಅಳೆಯಲು ಹೋದ ಉಪ್ಪಿನ ಹರಳಿನಂತೆ.

ಒಮ್ಮೌನವಾದರೆ ಒಡನೆ ನುಡಿವನು ಇಮ್ಮೌನವಾದರೆ ನುಡಿಯುವ, ಬಲ್ಲೆವೆಂಬುವರ ಬಳಿಸಾರನು; ಸುಮ್ಮನಿರಬಲ್ಲವರೊಡನೆ ಬೆರೆತಿಹನು, ಉಂಡು ಉಪವಾಸಿ; ಒಯಲ ಒಣ್ಣವ ಮಾಡುವನೊಮ್ಮೆ, ಒಣ್ಣ ಬಯಲ ಮಾಡುವ ನಿನ್ನೊಮ್ಮೆ ; ಒಂದು ಎರಡಾದುದು, ಎರಡು ಒಂದಾದುದು; ಆತನ ದೃಷ್ಟಿಯಲ್ಲಿ ತೆರೆಯುಡಗಿದ ಅಂಬುಧಿಯಂತೆ ಪರಿ ಪರಿಯ ಕಲ್ಪನೆಗಳಡಗಿಹವು ಆತನ ಮನದಲ್ಲಿ, ನೀರು ತೆರೆಯಾದಂತೆ ಬಹು ವಿಲಾಸಗಳಲಿ ಸಂಚರಿಪನು. ಮೂಲೋಕಗಳಲಿ ಇವನ ಮಹಿಮೆ ಮೇಳೈಸಿ ಮೋಳಗಿದರೂ ಯಾರಿವನು ? ನಾನರಿಯೆ !

ಬಗೆದೋರಿಕೆ ಜಗದುದ್ಭವವೆಂದು ಬಗೆವಿಸ್ತರಿಸಿದುದೇ ಸ್ಥಿತಿಯೆಂದು ಭಾವಿಸಿ ಬಗೆಗಡಲುದು ಲಯವೆಂದು ಜೀವೇಶ್ವರೈಕತ್ವಮಿದೆಂದು ನಿರ್ಗುಣ ಶೈಲಿಯಲಿ; ನಿರ್ವಾಣದ ನಿಜವಂ ತಿಳುಹಿದನು. ತಮ್ಮನತಿಗಳೆದು ತನ್ನವನೆ ಬಗೆದು ಬಲ್ಲೆನೆಂದು ಭಾವುಕರೆ, ಬಲ್ಲೊಡೆ ಪೇಳಿರಾ ಇವನಾರು !

## ಇಲ್ಲಿಗೆ

## ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಮಹಾರಾಜೇಂದ್ರ ಮಹಾಶಿವಾಚಾರ್ಯರ ಜೀವನ ಚರಿತೆಯ

## ಪೂರ್ವಾರ್ಧದ ಕೊನೆ.

## ವಂದೇ ರೇಣುಕಂ !

ಲೇಖಕರು:— ನವೀನಸಾಹಿತಿ ಬಸವರಾಜ ಅಂಗಡಿ ಬಂಕಾಪುರ.

# ಪ್ರಸನ್ನ ರೇಣುಕ

ಪ್ರಸನ್ನ ರೇಣುಕ । ವೀರ ಗಂಗಾಧರ ।
ರಾಜೇಂದ್ರ ನಮಿಪೆ ॥ ಪಲ್ಲ ॥ ಅಹಾ ।
ಶಿವ ಮತದ ಗುರು ನೀ । ಗಂಗಾಧರ ಶಿವಯೋಗಿ ।
ಅಹಾ । ನಮಿಪೇನೇ ನಮಿಪೆ ॥೧॥
ಪಂಚ ಸಿಂಹಾಸನದಿ । ಮಿಂಚಿ ಶೋಃಭಿಸನೀ ।
ಗುರುವೇ । ನಮಿಪೇನೆ । ನಮಿಪೆ ॥೨॥
ವೀರ ಪೀಠ ಶೇವೆಗೈವ । ಸದಾ ಬಸವರಾಜ ।
ಸದಯ । ನಮಿಪೇನೇ ನಮಿಪೆ ॥೩॥

ಬಸವರಾಜ ಅಂಗಡಿ ಬಂಕಾಪೂರ

# ಗುರು ನೀನೆ ಗತಿ

[ಧಾಟಿ:- ಅಬತೇರೆಶಿವಾ ಕೌಸಮೇರಾ ಕೃಷ್ಣಕನಯ್ಯಾ ಎಂಬಂತೆ]

ಗುರು ನೀನೆ ಗತಿ ನನ್ನ ದೇವ ರೇಣುಕನಯ್ಯ ।
ಶರಣಾನುಮತಿ ರಕ್ಷಿಸೆ ದಯೆ ತೋರುವನಯ್ಯ ॥
ಕೊಲ್ಲಿಪಾಕಿಯೊಳು ಜನಿಸಿ;
ಬಾಳಿಹಳ್ಳಿಯ ವಾಸಿ;
ಇಲ್ಲಿ ನೂಕಿ ಲಿಂಗಾಂಗಿಯಾ ಜನ್ಮವನೆ ತಾರಿಸಿ,
ಜಗದೊಳು ನೀನು ಸ್ವಾಮಿಯಾಗಿ ಮಾಣಿಸಿದಯ್ಯ ।
ಶರಣಾನುಮತಿ ರಕ್ಷಿಸೆ ದಯ ತೋರುವನಯ್ಯ ॥
ಪೂಜಾ ಸಲಿಸಿ । ಸಾರಿ ॥
ಮಾಡುವೆವೈ ಆರತಿ ।
ಮಾಡಿ ಭಜನೆ ಮನಸಿನಿಂದ,
ಕೂಡಿ ಪರಮಾರತಿ ।
ಮುಕುತಿಯೈ ದೇವ ದೇವನೆಲೆ,
ಸಾಯುಜ್ಯವಯ್ಯಾ ।
ಶರಣಾನ್, ಶರಣಾನ್
ಶರಣಾನುಮತಿ ರಕ್ಷಿಸೆ ದಯೆ ತೋರುವನಯ್ಯ ॥
ಗುರು ನೀನೆ ಗತಿ ನನ್ನ ದೇವ ರೇಣುಕನಯ್ಯ ।
ಶರಣಾನುಮತಿ ರಕ್ಷಿಸೆ ದಯ ತೋರುವನಯ್ಯ ॥

ಬಸವರಾಜ ಅಂಗಡಿ ಬಂಕಾಪೂರ

# ವರಪಾಲಿಸು ಶಿವಯೋಗಿ



[ಧಾಟಿ— ಪರಿಪಾಲಿಸೌ ಜಗದಂಬೆ ಎಂಬ ವಸಂತಸೇನಾ]

ವರಪಾಲಿಸು ಶಿವಯೋಗಿ ।
ಪಾವನ ತಪಸಿ ಮಂಗಲ ಹರಿಸಿ ॥ ಪಾಲಿಸು ॥
ಭಕುತರೋದ್ಧಾರಕೆ ಯತಿಯಾಗಿಹೆನೀ ।
ಭಕುತರ ಪೊರೆಯುವ ದೇವನೆ ನೀ ।
ಮುಕುತಿಯುಲಿ ಮಂದಿರನೆ ।
ನೂಕಿಯು ಭವ ಬಂಧನವನೆ ನೀಂ ॥ ಪಾಲಿಸು ॥
ಗುರು ಗಂಗಾಧರ ಯತಿವರನೆ ।
ಕರುಣಾಂಕರನೇ ತಾನೇ ॥
ಮನ, ತನು, ಧನವ ಅರ್ಪಿಸುವೆ ।
ವಿನಯ ಸ್ವಾಮಿಯ ಸದ್ಗುರುವೆ ॥
ತನಯನೊಳು ದಯ ತೋರೋ ।
ಮನದಧಿ ದೇವನೆ ಕನಿಕರದಿಂ ॥ ಪಾಲಿಸು ॥

ಬಸವರಾಜ ಅಂಗಡಿ ಬಂಕಾಪೂರ

ಈ ಪುಸ್ತಕ ಪ್ರಚಾರಕರು.



ವೇ|| ವೀರಭದ್ರಯ್ಯನವರು ಕಲ್ಯಾಣಮಠ,
ಬಂಕಾಪೂರ.

ಸಮಸ್ತ ವೀರಶೈವರೆಲ್ಲರೂ ಮನೆ ಮನೆಗೂ ಸಂಗ್ರಹಿಸಿ
ಅವಶ್ಯ ಓದಬೇಕಾದ ಪುಸ್ತಕ.

ರಂಭಾಪುರೀ ಪೀಠದೊಡೆಯರೂ, ಭೀಷ್ಮ ಬ್ರಹ್ಮಚಾರಿಗಳೂ,
ಮಹಾ ತಪಸ್ವಿಗಳೂ, ಅನುಪಮ ಶಿವಯೋಗಿಗಳೂ ಆದ

# ಶ್ರೀ ಜಗದ್ಗುರು ಪ್ರಸನ್ನ ರೇಣುಕ
# ವೀರ ಗಂಗಾಧರ ಮಹಾ ಶಿವಾಚಾರ್ಯರ

## ಜೀವನ ಚರಿತೆ



ಪುಸ್ತಕ ದೊರೆಯುವ ಸ್ಥಳ:—
ಶ್ರೀ ವ್ಹಿ. ಎಂ. ಕಲ್ಯಾಣಮಠ ಬುಕ್ಕಸೇಲರ
ಬಂಕಾಪೂರ.

## ಇದೇ ಗ್ರಂಥಕರ್ತರಿಂದ
## ಹೊರಡಲಿರುವ ಹೊತ್ತಗೆಗಳು.

ಶಬ್ದ ಚಿತ್ರ— ಕವನ ಸಂಗ್ರಹ
ಒಕ್ಕಟ್ಟಿೀ ಬಲ— ಏಕಾಂಕ
ಕರ್ನಾಟಕ ಏಕೀಕರಣ— ನಾಟಕ

—: ಪ್ರೌಢ ಶಿಕ್ಷಣ ಪುಸ್ತಕಗಳು :—

ವಯಸ್ಕರ ಶಿಕ್ಷಕ- - ಪ್ರೌಢರ ಅಕ್ಷರಮಾಲೆ
ವಯಸ್ಕರ ಪದ್ಯಾವಲಿ— ನೀತಿಯು ಗೀತೆಗಳ ಸಂಗ್ರಹ
ವಯಸ್ಕರ ಸರಸ ಕತೆಗಳು— ಬೋಧಾತ್ಮಕ ಕತೆಗಳ ಸಂಗ್ರಹ
ಕಲಿಯದವರ ಬಾಳು— } ಚಿಕ್ಕ ನಾಟಕಗಳು
ನಿರಕ್ಷರತಾ ನಿರ್ಮೂಲನ— }

ರೇಣುಕ ಗೀತಾವಳಿ— ಭಜನಾ ಸಂಗ್ರಹ } ಬೇಗನೆ ಹೊರಬೀಳುವವು.
ಮತಿವಂತನ ವಚನ— ವಚನ ಸಂಕಲನೆ }

## ಪ್ರಕಟವಾದ ಪುಸ್ತಕಗಳು

| | | |
|---|---|---|
| ಮಕ್ಕಳ ಪದ್ಯಾವಲಿ— | ಬೆಲೆ | ಐದಾಣೆ |
| ಗಾಂಧೀ ವಚನ ಗೀತೆ— | „ | ಎರಡಾಣೆ |
| ಪ್ರಸನ್ನ ರೇಣುಕ ಜೀವನ ಚರಿತೆ— | „ | ಒಂದು ರೂಪಾಯಿ |